# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

‘ एतज्ज्ञेयं नित्यमेवाऽऽत्मसंस्थं नातःपरं वेदितव्यं हि किञ्चित् ’

ಸಂಪುಟ ೫೪ ಏಪ್ರಿಲ್ ೧೯೮೫ ಸಂಚಿಕೆ ೮

ವಿಷಯಗಳು



ಪತ್ರಿಕೆಯ ಚಂದಾ

ವರ್ಷಕ್ಕೆ

ರೂ. ೧೫-೦೦

ಪೋಷಕರಿಗೆ ರೂ. ೨೦-೦೦

ಮಹಾಪೋಷಕರಿಗೆ ರೂ. ೧೫೧-೦೦




ಹೊಸ ಚಂದಾದಾರರನ್ನು

ಕೂಡಿಸಿ ಪತ್ರಿಕೆಯನ್ನು

ಪ್ರೋತ್ಸಾಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ:

ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

April 1985 

# ಕಾರ್ಯಾಲಯದ ಸುದ್ದಿ

**ಶ್ರೀಶಂಕರಜಯಂತಿ:** ಸ್ಥಳದಲ್ಲಿ (ಹೊಳೆನರಸೀಪುರ) ತಾ॥ 21-4-85 ನೇ ಭಾನುವಾರದಿಂದ ನಾಲ್ಕು ದಿನಗಳ ಕಾಲ ಶ್ರೀಶಂಕರಜಯಂತೀ ಪ್ರಯುಕ್ತ ಬೆಳಗಿನ ವೇಳೆಯಲ್ಲಿ ವಿಶೇಷ ಪೂಜೆ, ಭಾಷ್ಯಪ್ರವಚನಗಳೂ ಸಂಜೆ 8 ರಿಂದ ಸ್ಥಳೀಯ ಶಾರದಾ-ಶಂಕರಾಚಾರ್ಯದೇವಾಲಯದಲ್ಲಿ ಉಪನ್ಯಾಸಗಳೂ ನೆರವೇರುವವು. ತಾ॥ 25-4-85 ನೇ ಗುರುವಾರ ಮಂಗಳವಾಗುವದು. ಸರ್ವರಿಗೂ ಸುಸ್ವಾಗತ.

**ಪಾಠಪ್ರವಚನಗಳು :** ವಿದ್ಯಾರ್ಥಿ ಶ್ರೀ ಕೃಷ್ಣಮೂರ್ತಿಯವರಿಗೆ ತೈತ್ತಿರೀಯೋಪನಿಷದ್ಭಾಷ್ಯ- ಗೀತಾಭಾಷ್ಯಪಾಠಗಳು ಮುಂದುವರೆಯುತ್ತಿವೆ. ಪಂಡಿತರ ಗೈರುಹಾಜರಿಯಲ್ಲಿ ಶ್ರೀ ಮೂರ್ತಿಗಳು "ಭಕ್ತಿಚಂದ್ರಿಕೆ" ಪ್ರವಚನವನ್ನು ನಡೆಸಿ ಪೂರ್ಣಗೊಳಿಸಿದ್ದಾರೆ. ಮಧ್ಯಾಹ್ನದ ವೇಳೆಯಲ್ಲಿ ಸಾಮೂಹಿಕ ವಿಷ್ಣುಸಹಸ್ರನಾಮ ಪಾರಾಯಣವೂ ನಡೆಯುತ್ತಿದೆ.

**ಗ್ರಂಥಗಳ ಪ್ರಕಟನೆ : ಮುದ್ರಣ :** (೧) **ಶಿವಕವಚ**-(ಹೊಸ ಮುದ್ರಣ) ಪ್ರಕಟವಾಗಿ ಮಾರಾಟಕ್ಕೆ ಸಿದ್ಧವಾಗಿದೆ. ಹಿಂದಿನಂತೆಯೇ ಬೆಲೆ ರೂ. ೨-೫೦ ನ್ನೇ ಗೊತ್ತುಮಾಡಿದೆ (೨) **ಬೃಹದಾರಣ್ಯಕದ ಎರಡೂ ಭಾಗಗಳು** ಬೈಂಡಾಗುತ್ತಿವೆ. ಬೈಂಡರ್‌ಗಳ ಅಭಾವದಿಂದ ಕೆಲಸವು ಸ್ವಲ್ಪ ವಿಳಂಬವಾಗಿದೆ. ಒಟ್ಟು ಎರಡು ಭಾಗಗಳಿಂದ ೧೬೨೮ ಪುಟಗಳು ಹಾಗೂ ಹಾಫ್ ಕ್ಯಾಲಿಕೋಬೈಂಡು, ಅಂದವಾದ ರಕ್ಷಾಕವಚ ಮತ್ತು ಪ್ಲಾಸ್ಟಿಕ್ ಕವರ್ ಸಹ ಉಳ್ಳ ಈ ಮಹಾಗ್ರಂಥದ ಬೆಲೆಯನ್ನು ಸದ್ಯಕ್ಕೆ **200 ರೂ.** (ಎರಡುನೂರುರೂಪಾಯಿಗಳು) ಎಂದು ಗೊತ್ತುಮಾಡಿದೆ. ಅಂಚೆ ವೆಚ್ಚ ಪ್ರತ್ಯೇಕ. ಪ್ರತಿಗಳು ಮಾರಾಟಕ್ಕೆ ಸಿದ್ಧವಾದೊಡನೆಯೇ ತಿಳಿಸಲಾಗುವದು. (೩) **ಸದ್ಗುರುಚರಿತಾಮೃತ - ಸರಸ್ವತೀರಹಸ್ಯೋಪನಿಷಚ್ಚಂದ್ರಿಕೆ**-ಗ್ರಂಥಗಳ ಮುದ್ರಣವು ಮುಂದುವರೆದಿದೆ. (೪) **ಛಾಂದೋಗ್ಯೋಪನಿಷದ್ಭಾಷ್ಯ** ಮುದ್ರಣವು ಸಹ ನಡೆಯುತ್ತಿದ್ದು ಈವರೆಗೆ ೧೧೨ ಪುಟಗಳಾಗಿವೆ. ಭಕ್ತಮಹನೀಯರೊಬ್ಬರ ನೆರವಿನಿಂದ ಈ ಮಹಾಗ್ರಂಥಕ್ಕೆ Map Litho ಎಂಬ ವರ್ಗದ ಉತ್ತಮ ಬಿಳಿಯ ಕಾಗದವನ್ನು ಬಳಸಲಾಗುವದು.

**ಸಂಪಾದಕರು :** ಕಳೆದ ಗಣರಾಜ್ಯೋತ್ಸವ ದಿನದಂದು ಸ್ಥಳೀಯ ತಾಲ್ಲೂಕು ಪುಟ್ಟದ ಕನ್ನಡ ಸಾಹಿತ್ಯ ಪರಿಷತ್ತಿನವರು ಸಂಪಾದಕರನ್ನು ಸನ್ಮಾನಿಸಿ **'ಅಧ್ಯಾತ್ಮವಿದ್ಯಾರತ್ನ'** ಎಂಬ ಪ್ರಶಸ್ತಿಯನ್ನು ನೀಡಿದರು. 15-3-85 ರಂದು ಬೆಂಗಳೂರು ಮಲ್ಲೇಶ್ವರಂ ಶ್ರೀರಾಮ ಭಜನ ಸಭೆಯವರು ನಡೆಯಿಸಿದ ಭಾಗವತ ಸಮ್ಮೇಳನದಲ್ಲಿ ಸಂಪಾದಕರನ್ನು ಗೌರವಿಸಿ **'ಭಾಗವತಸಾರಜ್ಞ'** ಎಂಬ ಪ್ರಶಸ್ತಿಯನ್ನು ನೀಡಿದರು. ತಾ॥ 24-2-85 ರಿಂದ ಒಂದು ವಾರ ಕಾಲ ಕೋಲಾರದಲ್ಲಿ ಬೆಳಗ್ಗೆ ಹಾಗೂ ಸಂಜೆ ಎರಡು ವೇಳೆಯಲ್ಲೂ ವೇದಾಂತಪ್ರವಚನಗಳನ್ನು ನಡೆಯಿಸಿದರು. ಏಪ್ರಿಲ್ ಮಾಹೆಯ ಕಡೆಯ ವಾರದಲ್ಲಿ ಶಂಕರಜಯಂತೀ ಉಪನ್ಯಾಸಗಳಿಗಾಗಿ ಕೋಲಾರ, ಬೆಂಗಳೂರು, ಹುಬ್ಬಳ್ಳಿಗಳಲ್ಲಿ ಪ್ರವಾಸಮಾಡಲಿದ್ದಾರೆ.

**(ಪತ್ರಿಕೆಯ ಒಳಪುಟವನ್ನೂ ನೋಡಿರಿ)**

॥ ಓಂ ॥

# ಅಧ್ಯಾತ್ಮ ಪ್ರಕಾಶ



ಸಂಪುಟ ೫೪]  ವರ್ಷಕ್ಕೆ ರೂ. ೧೫-೦೦ ; ಬಿಡಿ ಸಂಚಿಕೆಗೆ : ರೂ. ೧.೨೫  [ಸಂಚಿಕೆ ೮

ಏಪ್ರಿಲ್-1985

( ಶ್ರೀ ಕ್ರೋಧನಸಂವತ್ಸರದ ಚೈತ್ರ )

## ಜೀವನಿಗೆ ನಾಶವಿಲ್ಲ

**ಓಂ ॥ ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತ ಇತಿ ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ॥**

—ಛಾಂದೋಗ್ಯೋಪನಿಷತ್ತು ೬-೧೧-೩.

**ಭಾವಾರ್ಥ:**- "( ಮಗು, ) ಜೀವನಿಂದ ರಹಿತವಾಗಿಯೇ ಇದು ಸಾಯುತ್ತದೆ. ಜೀವನು ಸಾಯುವದಿಲ್ಲ. ಆ ಈ ಅಣಿಮೆಯಿದೆಯಲ್ಲ, ಇದೆಲ್ಲವೂ ಏತದಾತ್ಮ್ಯವು. ಅದು ಸತ್ಯವು ; ಅದೇ ಆತ್ಮನು ; ಶ್ವೇತಕೇತುವೆ, ಅದೇ ನೀನಾಗಿರುವೆ"

[ ದೇಹಾತ್ಮರುಗಳ ಗುಂಪಿನಲ್ಲಿ ದೇಹವು ಮರದಂತೆ ಇದೆ. ಜೀವವಿಲ್ಲದ ಮರದ ಕೊಂಬೆಯು ಒಣಗುತ್ತದೆ. ಹಾಗೆಯೇ ಜೀವಾತ್ಮನಿಲ್ಲದ ದೇಹವು ನಾಶವಾಗುವದು. ಆದರೆ ಕೊಂಬೆಯು ಹೋದರೆ ಅಥವಾ ಪೂರ್ತಿಯಾಗಿ ಮರವೇ ಬಿದ್ದುಹೋದರೂ ಜೀವವಿಲ್ಲವೆನ್ನಲಾಗುವದಿಲ್ಲ. ಏಕೆಂದರೆ ಬೇರೊಂದು ಮರದಲ್ಲಿ ಜೀವತತ್ತ್ವವು ಕಂಡುಬರುವದು. ಹಾಗೆಯೇ ಜೀವಾತ್ಮನು ದೇಹವನ್ನು ಬಿಟ್ಟರೂ ಅವನಿಗೆ ನಾಶವಿಲ್ಲ. ಅವನು ಪರಬ್ರಹ್ಮವೇ- ಎಂದು ಅಭಿಪ್ರಾಯ. ]

———

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ಶರೀರಕ್ಕೆ ನಾಶವೇ ಹೊರತು ಜೀವನಿಗಲ್ಲ

ಛಾಂದೋಗ್ಯೋಪನಿಷತ್ತಿನಲ್ಲಿ ಶ್ವೇತಕೇತು- ಉದ್ದಾಲಕರ ಸಂವಾದರೂಪದಿಂದ ಜೀವಬ್ರಹ್ಮರ ಐಕ್ಯವನ್ನು ಪ್ರತಿಪಾದನೆಮಾಡುವ "ತತ್ತ್ವಮಸಿ" ಮಹಾವಾಕ್ಯವು ಒಂಭತ್ತು ಬಾರಿ ಬಂದಿರುತ್ತದೆ. ಹೀಗೆ ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುವ ಉದ್ದೇಶವೇನೆಂದರೆ : ಪ್ರತಿಪರ್ಯಾಯದಲ್ಲಿಯೂ ವಿಚಾರಕನಾದವನಿಗೆ ಬೇರೆಬೇರೆಯ ದೃಷ್ಟಿಕೋನದಿಂದ ಬರಬಹುದಾದ ಸಂಶಯಗಳನ್ನು ಪರಿಹರಿಸಿ ಪರಬ್ರಹ್ಮಸ್ವರೂಪದಲ್ಲಿಯೇ ಅವನನ್ನು ನೆಲೆನಿಲ್ಲುವಂತೆ ಮಾಡುವದೇ ಕರ್ತವ್ಯವಾಗಿದೆ. ಪ್ರಕೃತ ಸುಷುಪ್ತಿಯ ವಿಚಾರವು ಪ್ರಸ್ತುತವಾಗಿದ್ದು- ಹಿಂದಿನ ಸಂದೇಶದಲ್ಲಿ ತಿಳಿಸಿರುವಂತೆ-ಸುಷುಪ್ತಿಯಲ್ಲಿ ಏಕತ್ವವಿರುವದರಿಂದ ಸತ್ಸಂಪತ್ತಿಯು ತಿಳಿಯದೆ ಹೋಗಿದೆ -ಎಂಬ ಸಮಾಧಾನವನ್ನು ಕೊಡಲಾಗಿದೆ. ಆದರೆ ಎದ್ದಮೇಲಾದರೂ ಅದು ಗೊತ್ತಾಗಬೇಡವೆ? ಏಕೆಂದರೆ ಎಚ್ಚರದಲ್ಲಿ ದ್ವೈತವಿರುವದರಿಂದ ಜ್ಞಾನವುಂಟಾಗಬಹುದಲ್ಲ? ಯಾರೊಬ್ಬರಿಗೂ ಎಚ್ಚರದ ಸ್ಥಿತಿಯಲ್ಲಿ ಅವರವರ ಸುಷುಪ್ತಿಯಲ್ಲಿ ಬ್ರಹ್ಮಪ್ರಾಪ್ತಿಯಾಗಿತ್ತೆಂದು ಎಂದೂ ಗೊತ್ತಾಗುವದೇ ಇಲ್ಲವಲ್ಲ? ಏಕೆ? ಎಂಬ ಸಂಶಯವು ಬರಬಹುದಾಗಿದೆ. ಅದಕ್ಕೆ ಶ್ರುತಿಯು ಈಗ ಉದಾಹರಣಪೂರ್ವಕವಾಗಿ ಉತ್ತರವನ್ನು ಹೇಳುತ್ತದೆ.

ಪ್ರಪಂಚದ ಜನಜೀವನಕ್ಕೆ ನೀರು ಅತ್ಯಗತ್ಯವಾದ ವಸ್ತುವಾಗಿದೆ. ' ಅದು ನದಿಗಳಿಂದ ಬಹಳಮಟ್ಟಿಗೆ ದೊರೆಯುತ್ತದೆ. ಪರ್ವತದಮೇಲೆ ಬೀಳುವ ಮಳೆಯಿಂದ ನದಿಗಳು ಹುಟ್ಟಿಹರಿಯುವವು. ಅನಂತರ ಸಮುದ್ರವನ್ನು ಸೇರುತ್ತವೆ. ಅವು ಹರಿಯುತ್ತಿರುವಾಗ ಗಂಗೆ, ಯಮುನೆ, ಕಾವೇರಿ, ತುಂಗಭದ್ರಾ- ಮುಂತಾದ ಹೆಸರುಗಳಿಂದಲೂ !ಪಶ್ಚಿಮವಾಹಿನಿ, ಉತ್ತರವಾಹಿನಿ, ಶೀತಲವಾಹಿನಿ- ಎಂಬ ವಿಶೇಷನಾಮಗಳಿಂದಲೂ ಕರೆಯಲ್ಪಡುವವು. ಅನಂತರ ಸಮುದ್ರದಲ್ಲಿ ಎಲ್ಲಾ ನದಿಗಳೂ ಸೇರಿ ಒಂದಾಗಿಬಿಡುವವಾದ್ದರಿಂದ ತಮ್ಮ ನಾಮರೂಪಗಳನ್ನೂ ವಿಶೇಷ ವ್ಯವಹಾರವನ್ನೂ ಕಳೆದುಕೊಂಡು ಬಿಡುವವು. ಪುನಃ ಬೇಸಗೆಯಲ್ಲಿ ಅದೇ ಸಮುದ್ರದ ನೀರೇ ಸೂರ್ಯನ ಶಾಖದಿಂದ ಆವಿಯಾಗಿ ಮೇಲಕ್ಕೆ ಏರಿ ಮೋಡಗಳಾಗಿ ಮಳೆಗರೆಯುವವು. ಮತ್ತೆ ಆಯಾ ಹೆಸರಿನ ನದಿಗಳಾಗಿ ಹರಿಯುವವು. ಇಷ್ಟೆಲ್ಲ ನಾವು ತಿಳಿದಿದ್ದರೂ ಯಾವ ನದಿಗೂ ತಾನು ಸಮುದ್ರದಿಂದಲೇ ಬಂದಿರುವೆನು- ಎಂಬ ಅರಿವಿರುವದಿಲ್ಲ. ಮತ್ತು ಹುಟ್ಟುವ ಮುಂಚೆ ತಾನು ಸಮುದ್ರವಾಗಿಯೇ ಇದ್ದೆನು ಎಂಬ ತಿಳಿವಳಿಕೆಯೂ ಇರುವದಿಲ್ಲ. ಈ ಉದಾಹರಣೆಯನ್ನು ವಾಚಕರು ತಮ್ಮ ತಮ್ಮ ಸುಷುಪ್ತಿಗೂ ಅನ್ವಯಿಸಿಕೊಳ್ಳಬೇಕೆಂದು ಶ್ರುತಿಯು ಉಪದೇಶಿಸುತ್ತಿದೆ.

ಈಗ ದಾರ್ಷ್ಟಾಂತಿಕವನ್ನು ವಿಚಾರಮಾಡೋಣ. ಸುಷುಪ್ತಿಯನ್ನೇ ಆನಂದಮಹಾಸಮುದ್ರವೆಂದಿಟ್ಟುಕೊಳ್ಳೋಣ. ಪರ್ವತದಂತೆ ಗಹನವಾದ ಪ್ರಪಂಚಜೀವನದಲ್ಲಿ ಜೀವರುಗಳ ಹುಟ್ಟು-ಬದುಕುಗಳು ಅವರವರ ಕರ್ಮಾನುಸಾರವಾಗಿ ದಿಕ್ಕುವಿದಿಕ್ಕುಗಳಿಗೆ ನೀರಿನಂತೆ ಹರಿಯುತ್ತಿರುವವು. ಎಚ್ಚರಕನಸುಗಳಲ್ಲಿ ಇಂದ್ರಿಯಮನೋಬುದ್ಧಿಗಳೊಡೆಯನಾದ ಜೀವನು ತನ್ನನ್ನು ಶರೀರಿಯೆಂದುಕೊಂಡು ಉಚ್ಚನೀಚಪದಾರ್ಥಗಳನ್ನು ಕಾಣುತ್ತಾ ಅವುಗಳಲ್ಲಿ ರಾಗದ್ವೇಷಗಳನ್ನು ಮಾಡುತ್ತಾ ಸಾಗುತ್ತಿರುವನು. ಈ ದೃಶ್ಯಮೋಹದಲ್ಲಿ ಅವನಿಗೆ ತಾನು ಯಾರು ? ಎಲ್ಲಿಂದ ಬಂದೆನು ? ಎಲ್ಲಿಗೆ ಹೋಗಿ ಸೇರಲಿರುವೆನು ? ಎಂಬ ಯೋಚನೆಯೇ ಬರುವಂತಿಲ್ಲ. ಇದೇ ಮಾಯೆಯು ಅಥವಾ ವ್ಯಾಮೋಹವು. ಆದರೇನು ? ಈ ಜೀವನು ತಾನು ತನ್ನನ್ನು ವಿಚಾರಿಸಿಕೊಳ್ಳದಿದ್ದಮಾತ್ರಕ್ಕೆ ಜಗದ್ವ್ಯಾಪಾರವಾಗಲಿ, ನಿಯಮಗಳಾಗಲಿ ಬದಲಾದೀತೆ? ಆಗಲಾರದು. ಆದರೂ ಎಚ್ಚರದಲ್ಲಿ ವಿಚಾರಮಾಡಿನೋಡುವ ಕೆಲವೇ ವಿವೇಕಿಗಳಿಗೆ ಒಂದು ನಿಜವು ತಿಳಿದು ಬರುತ್ತದೆ. ಏನೆಂದರೆ : ಜೀವನೆಂಬುವನು ತನ್ನ ಸ್ವರೂಪದಿಂದ ಬ್ರಹ್ಮದಂತೆ ಸ್ವತಂತ್ರನಾಗಿ ಇರುವವನಲ್ಲ. ಅವನು ಬ್ರಹ್ಮದಿಂದ ಹೊರಬಂದಿರುವ ಆನಂದದ ಹನಿಯಾಗಿರುವನು. ಅಥವಾ ಸಮುದ್ರದಿಂದ ಮಳೆಯ ಮೂಲಕ ಹೊರಬಿದ್ದ ನದಿಯ ನೀರಿನಂತೆ ದೇಹೇಂದ್ರಿಯನಾಮರೂಪವಿಶಿಷ್ಟನಾಗಿ ತೋರಿಕೊಳ್ಳುತ್ತಿರುವನು. ಅವನು ಆಗ ತಾನು ಬ್ರಹ್ಮವೇ ಎಂಬುದನ್ನು ಅರಿಯಲಾರದ ಸ್ಥಿತಿಯಲ್ಲಿರುವನು. ಹೀಗಿದ್ದರೂ ಬ್ರಹ್ಮಕ್ಕಿಂತ ಎಂದಿಗೂ ಬೇರೆಯಾಗಿರಲಾರನು. ಏಕೆಂದರೆ ಅವನಿಗೆ ಸ್ವತಂತ್ರಸತ್ತೆಯಿರುವದಿಲ್ಲ. ಅವನು ಪ್ರತಿದಿನವೂ ಸುಷುಪ್ತಿಯಲ್ಲಿ ತನ್ನ ಸ್ವರೂಪದಲ್ಲಿ ಒಂದಾಗಿರುವನು. ಆ ಕಾಲಕ್ಕೆ ಏಕತ್ವವೇ ಪರಮವಾಗಿರುವದರಿಂದ ಏನನ್ನೂ ಅರಿಯಲಾರದವನಾಗಿರುವನು. ಏಕತ್ವವು ಅವನಿಗೆ ಸ್ವಭಾವವಾಗಿದ್ದರೂ ಎಚ್ಚರದಲ್ಲಿ ಅರಿತುಕೊಂಡು ಅನಂತರ ಏಕೀಭೂತನಾಗದಿರುವದರಿಂದ ಅವಸ್ಥಾಪ್ರತಿಬದ್ಧವಾದ ಆ ಏಕೀಭಾವವು ಸುಷುಪ್ತಿಯು ಇಲ್ಲವಾಗಲು ಅದೂ ಇಲ್ಲವಾದಂತೆ ಆಗಿಬಿಡುವದು. ಇದರಿಂದ ಮತ್ತೊಮ್ಮೆ ಮತ್ತೊಮ್ಮೆ-ಹೀಗೆ ಪ್ರತಿದಿನವೂ ಸುಷುಪ್ತಿಯಿಂದೆದ್ದವನಾಗಿ-ಮಲಗುವ ಮುಂಚೆ ತಾನು ಏನಾಗಿದ್ದನೋ ಅದೇ ಆಗಿ ಮುಂದುವರೆಯುವನು. ಇದೇ ಸಂಸಾರವು. ಸಂಸಾರಧರ್ಮಗಳು ವ್ಯವಹಾರದೃಷ್ಟಿಯಿಂದ ಎಚ್ಚರಕನಸುಗಳಲ್ಲಿ ಫಲರೂಪವಾಗಿಯೂ ಸುಷುಪ್ತಿಯಲ್ಲಿ ಬೀಜರೂಪವಾಗಿಯೂ ಬ್ರಹ್ಮಜ್ಞಾನವುಂಟಾಗುವವರೆಗೂ ಇದ್ದುಕೊಂಡಿರುವವು. ಜೀವನು ಸದ್ಗುರುವನ್ನು ಬಳಿಸಾರಿ ವೇದಾಂತತತ್ತ್ವವನ್ನು ವಿಚಾರಮಾಡಿ ಅರಿತುಕೊಂಡನಾದರೆ ಈ ಸಂಸಾರವು ಬಾಧಿತವಾಗಿಬಿಡುವದರಿಂದ ಅವಸ್ಥಾತ್ರಯರಹಿತನಾದ ತುರೀಯನೇ ತಾನೆಂದು ಗೊತ್ತಾಗಿಬಿಡುವದರಿಂದ ಸಂಸಾರವೇ ಇಲ್ಲವಾಗಿಬಿಡುವದು. ಆಗ ಸಂಶಯಗಳೂ ಇಲ್ಲವಾಗುವವು.

ಈಗ ಇನ್ನೊಂದು ಪ್ರಶ್ನೆಯನ್ನು ಎದುರಿಸಬೇಕಾಗಿದೆ. ಜೀವನು ಪರಮಾತ್ಮನಿಗಿಂತ ಭಿನ್ನನಲ್ಲವೆಂಬುದೇನೋ ಸರಿ. ಆದರೆ ಪರಮಾತ್ಮನೊಬ್ಬನೇ ಪರಮಾರ್ಥತತ್ತ್ವವೆಂದಾದರೆ ಸಂಸಾರವು ಯಾರಿಗೆ ? ಎಂಬ ಪ್ರಶ್ನೆಯೇಳುತ್ತದೆ. ಪರಮಾತ್ಮನನ್ನೇ ಸಂಸಾರಿ-ಎನ್ನಲಾಗುವದಿಲ್ಲ. ಅವನು ನಿತ್ಯಶುದ್ಧಬುದ್ಧಮುಕ್ತಸ್ವಭಾವನೆಂದು ಶ್ರುತಿಗಳಲ್ಲಿ ತಿಳಿಸಿದೆ. ಆದ್ದರಿಂದ ಸಂಸಾರಿಯಾದ ಜೀವನೊಬ್ಬನು ಬೇರೆಯಾಗಿರಬೇಕೆನಿಸುತ್ತದೆ. ಹೀಗೆ ಬೇರೆಯಾಗಿ ಜೀವನನ್ನು ಒಪ್ಪಿದರೂ ಮತ್ತೆ ಕೆಲವು ಸಂಶಯಗಳು ಬಗೆಹರಿಯುವದಿಲ್ಲ. ಹೇಗೆಂದರೆ-ಸಂಸಾರಿಯಾದ ಜೀವನಿಗೆ ಜನನಮರಣಗಳು ಉಂಟೆ ? ಇಲ್ಲವೆ ? ಎಂಬ ಪ್ರಶ್ನೆ ಹುಟ್ಟುತ್ತದೆ. ಉಂಟು– ಎಂದರೆ ಸತ್ತಮೇಲೆ ಜೀವನಿಲ್ಲವೆಂದಾಗಿ ಕರ್ಮಫಲಾನುಭವಕ್ಕೆ ಕರ್ತೃವೇ ಇಲ್ಲವಾಗಿ ಶಾಸ್ತ್ರವು ಅಪ್ರಮಾಣವಾಗುವದು. ಜೀವನಿಗೆ ಜನನಮರಣಗಳಿಲ್ಲ ಎಂದಾದರೆ ಆ ಜನನಮರಣಗಳನ್ನು ಯಾರಿಗೆ ಗಂಟುಹಾಕಬೇಕು ? ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ. ಈ ವಿಷಯದಲ್ಲಿ ಶ್ರುತಿಯ ಸಮಾಧಾನವೇನೆಂದರೆ : "ಮಗು, ಜೀವನಿಗೆ ಖಂಡಿತವಾಗಿ ಜನನಮರಣಗಳಿಲ್ಲ. ಅವನು ಚೈತನ್ಯಸ್ವರೂಪನಾಗಿದ್ದು ಅಜನಾಗಿರುತ್ತಾನೆ. ಆದರೂ ಉಪಾಧಿವಶದಿಂದ ದೇಹಾದಿಗಳು ಹುಟ್ಟಿದರೆ ಅವನೂ ಹುಟ್ಟಿದನೆನ್ನುವರು ; ದೇಹವು ನಷ್ಟವಾದರೆ ಅವನೂ ನಾಶವಾದನು–ಎನ್ನುವರು. ಆದ್ದರಿಂದ ಜೀವತತ್ತ್ವವನ್ನು ಚೈತನ್ಯದೃಷ್ಟಿಯಿಂದ ನಿತ್ಯನೆಂದೂ ಅಸಂಸಾರಿಯೆಂದೂ ಪರಬ್ರಹ್ಮಕ್ಕಿಂತ ಅಭಿನ್ನನೆಂದೂ ತಿಳಿಯಬೇಕು. ಔಪಾಧಿಕದೃಷ್ಟಿಯಿಂದ ಸಂಸಾರಿಯೆಂದೂ ಕರ್ತೃಭೋಕ್ತೃವೆಂದೂ ತಿಳಿಯಬೇಕು. ಕರ್ತೃಭೋಕ್ತೃವೆನಿಸಿರುವನಾದರೂ ಜೀವನು ನಿತ್ಯನೇ ಎಂಬಿದು ಸಿದ್ಧಾಂತವು. ಆದ್ದರಿಂದ ಕರ್ಮಫಲಭೋಗಕ್ಕಾಗಿ ಅವನು ಜನ್ಮಾಂತರದೇಹಾಂತರಗಳನ್ನು ಪಡೆಯುತ್ತಿರುತ್ತಾನೆ. ಹೀಗೆ ಪಡೆಯುವಾಗ ಯಾವ ದೇಹವನ್ನು ಬಿಡುವನೋ ಅದು ಬಿದ್ದುಹೋಗುವದು. ಬೇರೊಂದು ದೇಹವನ್ನು ಸ್ವೀಕರಿಸಿದಾಗ ಅದು ಬೆಳೆಯುವದು. ಈ ನ್ಯಾಯದಿಂದ ತಿಳಿದುಬರುವದೇನೆಂದರೆ : ಜೀವನಿಲ್ಲದ ದೇಹವು ನಾಶವಾಗುವದೇ ಹೊರತು ಜೀವನು ನಾಶವಾಗುವದಿಲ್ಲ. ಬಲ್ಬು ಬರ್ನ್ ಆದರೆ ಕತ್ತಲೆಯಾಗುವದು ನಿಜ. ಆದರೆ ಕರೆಂಟ್ ಏನೂ ಇಲ್ಲವಾಗುವದಿಲ್ಲ. ಹೊಸ ಬಲ್ಬ್ ಹಾಕಿದರೆ ಪುನಃ ಬೆಳಕು ಬರುವಂತೆಯೇ ಹೊಸಹೊಸ ದೇಹಗಳಲ್ಲಿ ಪುನಃ ಜೀವನು ಆವಿರ್ಭೂತನಾಗುವನು. ಆದ್ದರಿಂದ ಜೀವನನ್ನು ಜೀವನೆಂದು ವ್ಯವಹರಿಸಬೇಕಾದರೆ ಉಪಾಧಿಸಹಿತನನ್ನಾಗಿಯೇ ಕಂಡುಕೊಳ್ಳಬೇಕು. ಉಪಾಧಿಯಿಲ್ಲವಾದರೆ ಜೀವನ ಜೀವತ್ವವೂ ಬಾಧಿತವಾಗಿಬಿಡುವದರಿಂದ ಚೈತನ್ಯಸ್ವರೂಪದಿಂದ ಅಭೇದವೇ ನೆಲೆಗೊಳ್ಳುವದು. ಹೀಗೆ ಜೀವನೆನಿಸಿರುವ ನೀನು ಆ ಜಗತ್ಕಾರಣವಾದ ಪರಬ್ರಹ್ಮವೇ. ನಿನ್ನ ಜೀವತ್ವವೂ ಬ್ರಹ್ಮದ ಕಾರಣತ್ವವೂ ಎರಡೂ ಉಪಾಧಿಕೃತವೇ. ಎರಡು ಉಪಾಧಿಗಳನ್ನೂ ಕಿತ್ತೊಗೆದರೆ ಸದ್ಬ್ರಹ್ಮವೊಂದೇ ಪರಮಾರ್ಥವೆಂಬ ಜ್ಞಾನವು ಅನುಭವಾರೂಢವಾಗುವದು" ಎಂದು ತಿಳಿಸಿದೆ.

ಈಗ ಜೀವನಿತ್ಯತ್ವವನ್ನು ಶ್ರುತಿಯು ಮತ್ತೊಂದು ಉದಾಹರಣೆಯಿಂದಲೂ ಹೇಗೆ ಸಾಧಿಸುತ್ತಿದೆ ? ಎಂಬಿದನ್ನು ತಿಳಿಯೋಣ. ಒಂದು ದೊಡ್ಡ ಮರದ ಪೂರ್ಣ ಭಾಗಗಳನ್ನು ಒಮ್ಮೆಗೇ ನೋಡಿದಾಗ ಕೆಲವು ಸಂದರ್ಭಗಳಲ್ಲಿ ವೈಚಿತ್ರ್ಯಗಳು ಕಂಡು ಬರುತ್ತವೆ. ಆ ಮರದ ಒಂದು ಭಾಗಕ್ಕೆ ರೋಗವು ಅಂಟಿದ್ದರೆ ಅಥವಾ ಸಿಡಿಲು ಮುಂತಾದದ್ದರ ಸ್ಪರ್ಶವಾಗಿದ್ದರೆ ಅಲ್ಲಿ ಜೀವವಿರುವದಿಲ್ಲ. ಆದ್ದರಿಂದ ಬೆಳವಣಿಗೆಯೂ ಇರುವದಿಲ್ಲ. ಜೀವವಿರುವ ಉಳಿದ ಭಾಗಗಳಲ್ಲಿ ಬೆಳವಣಿಗೆಯಿದ್ದು ಹಸಿರಾಗಿರುವದು. ಹೂಹಣ್ಣುಗಳೂ ಕಾಣಿಸಿಕೊಳ್ಳುವವು. ಅಲ್ಲಿ ಸೌಂದರ್ಯವೂ ಜೀವನವೂ ಆನಂದವೂ ಅಡಗಿರುತ್ತವೆ. ಹಾಗೆಯೇ ಮನುಷ್ಯಶರೀರದಲ್ಲಿಯೂ ತಿಳಿಯಬೇಕು. ಇದರಿಂದ ಗೊತ್ತಾಗುವದೇನೆಂದರೆ : ಜೀವನು ಸಾಯುವದಿಲ್ಲ. ಜೀವನಿಲ್ಲದ ಭಾಗವು ಮಾತ್ರ ಸಾವನ್ನೂ ನಾಶವನ್ನೂ ಹೊಂದುವದು. ಹಾಗಾದರೆ ಜೀವನು ಶರೀರಾದಿ ಗಳಿಗಿಂತ ಬೇರೆಯೇ ಎಂದಾಯಿತಲ್ಲವೆ ? ಎಂದರೆ ಶ್ರುತಿಯು ಹೌದು-ಎಂದೇ ಒಪ್ಪಿ ಕೊಳ್ಳುತ್ತದೆ. ಬೇರೆಯಾದ್ದರಿಂದ ಬೇರೆ ಹಸು-ಕುದುರೆಗಳಂತೆ ಕಂಡುಬರ ಬೇಕಲ್ಲವೆ ? ಎಂದರೆ ಇಲ್ಲವೆನ್ನುತ್ತದೆ. ಏಕೆಂದರೆ ಜೀವನೆಂಬುವನು ಸ್ವರೂಪದಿಂದ ಪರಿಚ್ಛಿನ್ನನಲ್ಲ ; ಮೂರ್ತನಲ್ಲ, ಅಂತವುಳ್ಳವನಲ್ಲ ; ಅವನು ಅಪರಿಚ್ಛಿನ್ನವೂ ಅಮೂರ್ತವೂ, ಅನಂತವೂ ಆದ ಬ್ರಹ್ಮವೇ ಆಗಿರುವನು. ಆದ್ದರಿಂದಲೇ ಅಪ್ರಮೇಯನೂ ಆಗಿದ್ದು, ವಿಷಯವಾಗಿರುವ ವಸ್ತುಗಳಂತೆ ಬೇರೆಯಾಗಿ ಕಂಡು ಬರುವದಿಲ್ಲ. ಹೀಗೆ ಜೀವನು ನಿತ್ಯನಾಗಿರುವನು. ಭಗವದ್ಗೀತೆಯಲ್ಲಿಯೂ ಜೀವನ ವಿಷಯಕ್ಕೆ ತಿಳಿಸುವಾಗ ಅವನು ಹುಟ್ಟುಸಾವುಗಳಿಲ್ಲದವನೆಂದೂ ಅವಿ ನಾಶಿಯೂ ಅಪ್ರಮೇಯನೂ ಆಗಿರುವನೆಂದೂ ವರ್ಣಿಸಿದೆ.

ಈಗ ಈ ಜೀವ-ಬ್ರಹ್ಮರುಗಳ ಜಿಜ್ಞಾಸೆಯ ತಾತ್ಪರ್ಯವೇನೆಂಬುದನ್ನು ಗ್ರಹಿಸಬಹುದಾಗಿದೆ. ಯಾವ ವಾದಿಗಳಿಗಾಗಲಿ, ಮತಾಚಾರ್ಯರುಗಳಿಗಾಗಲಿ, ವಿಚಾರಕರಿಗಾಗಲಿ ಇಬ್ಬರು ಆತ್ಮರುಗಳಿದ್ದಾರೆಂಬುದು ಒಪ್ಪಿಗೆಯಾಗಿರುವದಿಲ್ಲ. ಹಾಗೆಯೇ ಆತ್ಮವು ಬ್ರಹ್ಮವಲ್ಲದ ಸಂಸಾರಿಯೆಂಬುದಾಗಲಿ ಬ್ರಹ್ಮವು ಆತ್ಮನಲ್ಲದ ಅನಾತ್ಮವೆಂಬುದಾಗಲಿ ಒಪ್ಪಾಗುವದಿಲ್ಲ. ಆತ್ಮಧರ್ಮಗಳೂ ಬ್ರಹ್ಮಧರ್ಮಗಳೂ ವ್ಯವಹಾರದೃಷ್ಟಿಯಿಂದ ಪರಸ್ಪರವಿರುದ್ಧವಾಗಿ ಕಂಡರೂ ಚೆನ್ನಾಗಿ ವಿಮರ್ಶಿಸಿ ನೋಡಿದಾಗ ಆತ್ಮನಲ್ಲಿ ಕಂಡುಬಂದ ಸಂಸಾರಿಧರ್ಮವು ಹುಸಿಯೆಂದೂ ಬ್ರಹ್ಮದ ಧರ್ಮಗಳಾದ ಸತ್ಯಜ್ಞಾನಾನಂದಗಳು ಪರಮಾರ್ಥವೆಂದೂ ಗೊತ್ತಾಗುವದು. ಇನ್ನುಳಿದಿರುವ ಸಮನ್ವಯವೆಂದರೆ ಬ್ರಹ್ಮವೂ ಆತ್ಮನೂ ಒಂದೇ- ಎಂಬ ಐಕ್ಯ ಜ್ಞಾನವೊಂದೇ ಆಗಿದೆ. ಅದನ್ನೇ 'ತತ್ತ್ವಮಸಿ' ಎಂದು ಶ್ರುತಿಯಲ್ಲಿ ಉಪದೇಶಿಸಿದೆ. ಈ ಐಕ್ಯಜ್ಞಾನವು ದೃಢವಾಗಿ ನೆಲೆಗೊಳ್ಳುವವರೆಗೂ ವಿಚಾರ-ಮನನ-ನಿದಿಧ್ಯಾಸ ಗಳನ್ನು ಜಿಜ್ಞಾಸುಗಳು ಮಾಡುತ್ತಿರಬೇಕು.

---

## ಸಾಮಾನ್ಯನೀತಿ

**ರೂಪಂ ಜರಾ ಸರ್ವಸುಖಾನಿ ತೃಷ್ಣಾ**
**ಖಲೇಷು ಸೇವಾ ಪುರುಷಾಭಿಮಾನಮ್ ।**
**ಯಾಚ್ಞಾ ಗುರುತ್ವಂ ಗುಣಮಾತ್ಮಪೂಜಾ**
**ಚಿಂತಾ ಬಲಂ ಹಂತ್ಯದಯಾ ಚ ಲಕ್ಷ್ಮೀಮ್ ॥ ೧ ॥**

೧. ಮುಪ್ಪು ಸೌಂದರ್ಯವನ್ನೂ, ದುರಾಶೆಯು ಎಲ್ಲಾ ಸುಖಗಳನ್ನೂ, ದುಷ್ಟಜನರ ಸೇವೆಯು ಆತ್ಮಗೌರವವನ್ನೂ, ಭಿಕ್ಷೆಬೇಡುವದು ತನ್ನ ಯೋಗ್ಯತೆಯನ್ನೂ, ತನ್ನನ್ನೇ ತಾನು ಹೊಗಳಿಕೊಳ್ಳುವದು ಸದ್ಗುಣಗಳನ್ನೂ ಚಿಂತೆಯು ದೈಹಿಕಶಕ್ತಿಯನ್ನೂ ಕ್ರೌರ್ಯವು ಸಂಪತ್ತನ್ನೂ ನಾಶಗೊಳಿಸುವವು.

**ಶುಷ್ಕೇಂಧನೇ ವಹ್ನಿರುಪೈತಿ ವೃದ್ಧಿಂ**
**ಬಾಲೇಷು ಶೋಕಶ್ಚಪಲೇಷು ಕೋಪಃ ।**
**ಕಾಂತಾಸು ಕಾಮೋ ನಿಪುಣೇಷು ವಿತ್ತಂ**
**ಧರ್ಮೋ ದಯಾವತ್ಸು ಮಹತ್ಸು ಧೈರ್ಯಮ್ ॥ ೨ ॥**

೨. ಬೆಂಕಿಯು ಒಣಗಿದ ಕಟ್ಟಿಗೆಯ ಆಶ್ರಯದಲ್ಲಿ, ಹಾಗೆಯೇ ಹುಡುಗಬುದ್ಧಿಯವರಲ್ಲಿ ದುಃಖವು, ಚಂಚಲಬುದ್ಧಿಯವರಲ್ಲಿ ಸಿಟ್ಟು, ಯುವತಿಯರಲ್ಲಿ ಕಾಮ, ಜಾಣರಲ್ಲಿ ಹಣ, ದಯೆಯುಳ್ಳವರಲ್ಲಿ ಧರ್ಮ, ಮಹಾತ್ಮರಲ್ಲಿ ಧೈರ್ಯ— ಇವು ವೃದ್ಧಿಯಾಗುವವು.

**ನಿರ್ವಾಣದೀಪೇ ಕಿಮು ತೈಲದಾನಂ**
**ಚೌರೇ ಗತೇ ವಾ ಕಿಮು ಸಾವಧಾನಮ್ ।**
**ವಯೋಗತೇ ಕಿಂ ವನಿತಾವಿಲಾಸಃ**
**ಪಯೋಗತೇ ಕಿಂ ಖಲು ಸೇತುಬಂಧಃ ॥ ೩ ॥**

೩. ದೀಪವು ಆರಿಹೋದ ಮೇಲೆ ಎಣ್ಣೆ ಹಾಕುವದೇನಿದೆ? ಹಾಗೆಯೇ ಕಳ್ಳನು (ಮನೆಯನ್ನು) ಹೊಕ್ಕು ಹೊರಟುಹೋದಮೇಲೆ ಎಚ್ಚರವಾದರೇನು? ಮತ್ತು ಮುದುಕನಾದಮೇಲೆ ಹೆಂಗಸಿನೊಡನೆ ಕ್ರೀಡೆಯೇನಿದ್ದೀತು? ನೀರೆಲ್ಲವೂ ಹರಿದುಹೋದ ಅನಂತರ ಒಡ್ಡುಹಾಕುವದೇನಿದೆ?

**ತ್ರಿವಿಕ್ರಮೋಽಭೂದಪಿ ವಾಮನೋಽಸೌ**
**ಸ ಸೂಕರಶ್ಚೇತಿ ಸ ವೈ ನೃಸಿಂಹಃ ।**
**ನೀಚೈರನೀಚೈರತಿನೀಚನೀಚೈಃ**
**ಸರ್ವೈರುಪಾಯೈಃ ಫಲಮೇವ ಸಾಧ್ಯಮ್ ॥ ೪ ॥**

೪. ವಿಷ್ಣುವು ತ್ರಿವಿಕ್ರಮನಾದನು. ಅವನೇ ವಾಮನನಾದನು; ಹಂದಿಯಾದನು. ನರ-ಸಿಂಹ ಬೆರೆತವನಾದನು. ಕೀಳು, ಅತಿಕೀಳು, ಕೀಳಾದದ್ದರಲ್ಲಿ ಕೀಳು-ಹೀಗೆ ಎಲ್ಲಾ ಉಪಾಯಗಳಿಂದಲೂ ಕಾರ್ಯಸಿದ್ಧಿಯನ್ನೇ ಸಾಧಿಸಲೇಬೇಕು.

———

# ಸತ್ಯಕಾಮನ ಪತ್ರಗಳು

## ಉದ್ಯೋಗಪತಿ-ಕಾರ್ಮಿಕರ ಸಂಬಂಧ

"ನಾನು ಒಂದು ಚಿಕ್ಕ ಕಾರ್ಖಾನೆಯ ಮಾಲಿಕನಾಗಿದ್ದೇನೆ. ಕೆಲವೇ ಮಂದಿ ನಮ್ಮಲ್ಲಿ ಕೆಲಸಗಾರರಿದ್ದಾರೆ. ಆಗಾಗ್ಗೆ ನನ್ನ ಉದ್ಯೋಗದಲ್ಲಿ ತೊಡಕುಗಳು ಸಂಭವಿಸುತ್ತವೆ. ಅವುಗಳನ್ನು ಲೌಕಿಕಪ್ರಯತ್ನಗಳಿಂದ ದಾಟಲು ಸಿದ್ಧನಾದ ಮೇಲೂ ದೈವಸಹಾಯವೂ ಅವಶ್ಯವೆಂದು ನನಗೆ ನಂಬಿಕೆಯಿರುವದರಿಂದ ಏನಾದರೂ ಧರ್ಮಕಾರ್ಯಗಳನ್ನೂ ಕೈಗೊಳ್ಳುತ್ತೇನೆ. ಆದರೆ ಕೆಲವರು ನನ್ನ ಸ್ನೇಹಿತರು ಧಾರ್ಮಿಕಭಾವನಾವಿರೋಧಿಗಳು. ಅವರುಗಳು "ದೇವರ ಹೆಸರಿನಲ್ಲೇಕೆ ದುಂದು ವೆಚ್ಚಮಾಡುತ್ತೀಯೆ? ಅದನ್ನೂ ಕಾರ್ಮಿಕರಿಗೇ ಹಂಚಿಬಿಡು. ಕೆಲಸಗಳು ಇನ್ನೂ ಚೆನ್ನಾಗಿ ಆಗುವವು-" ಎನ್ನುತ್ತಾರೆ. ಕಾರ್ಮಿಕರಲ್ಲಿಯೂ ಕೆಲವರಿಗೆ ಈ ವಿಚಾರವೇ ಪ್ರಿಯವಾಗಿದೆ. ಕೆಲವು ವೇಳೆ ನನ್ನ ಧಾರ್ಮಿಕನಡೆವಳಿಕೆಯನ್ನು ಅವರೂ ತಪ್ಪಾಗಿ ಭಾವಿಸಿ ಹೆಚ್ಚಿಗೆ ಕೂಲಿಯ ಹಣವು ಬೇಕೆಂದು ಹಟಹಿಡಿಯುತ್ತಾರೆ. ಇಂಥ ಸಂದರ್ಭದಲ್ಲಿ ನನ್ನ ಎಲ್ಲಾ ಆಗುಹೋಗುಗಳಿಗೂ ದೇವರನ್ನು ಕೈಬಿಟ್ಟು ಲೌಕಿಕೋಪಾಯಗಳು, ಕಾರ್ಮಿಕರನ್ನೇ ಶರಣುಹೋಗಲೆ? ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿ ನೀವು ಬರೆದಿರುವ ಪತ್ರವು ಬಂದಿದೆ.

ನಾನೇನೂ ಹೆಚ್ಚಿನ ವ್ಯವಹಾರಜ್ಞನಲ್ಲ. ಈಗಿನ ಸನ್ನಿವೇಶಗಳಲ್ಲಿ ದೇಶದಲ್ಲಿ ನೈತಿಕ-ಧಾರ್ಮಿಕಮಟ್ಟಗಳು ಎಷ್ಟರಮಟ್ಟಿಗೆ ಜೀವಂತವಾಗಿವೆ? ಅಧಿಕಾರಿಗಳು, ರಾಜಕಾರಣಿಗಳು, ಆಡಳಿತಯಂತ್ರನಿರ್ವಾಹಕರುಗಳಲ್ಲಿ ದೈವಿಕಭಾವನೆಯು ಶೇಕಡ ಎಷ್ಟಿದೆ? ಎಂಬಿದೂ ನನಗೆ ಸರಿಯಾಗಿ ತಿಳಿಯದು. ಯಾವನೊಬ್ಬನೂ ನೀರು ಹರಿಯುತ್ತಿರುವ ವಿರುದ್ಧವಾದ ದಿಕ್ಕಿಗೆ ಈಜುವದು ಲಾಭಕರವೂ ಅಲ್ಲ. ಆದ್ದರಿಂದ ಸತ್ಯಧರ್ಮಗಳೇನೇ ಇರಲಿ, ಕಲಿಯುಗದಲ್ಲಿ ಹಣವೇ ದೇವರಾಗಿರುವದರಿಂದ ಹಣದಲ್ಲಿ ನಿಮಗೆ ಆಶೆಯಿರುವವರೆಗೂ ಅದನ್ನು ಪಡೆಯಲು ಕಾಲಾನುಗುಣವಾಗಿ ಉಚ್ಚನೀಚಪ್ರಯತ್ನಗಳಿಂದ ಕೊಳ್ಳದೆ ಮುನ್ನುಗ್ಗಿ ಕೆಲಸಮಾಡಲೇಬೇಕು. ಆದರೆ ನಿಮ್ಮ ಸಂಪಾದನೆಯ ಧಾರ್ಮಿಕಾಂಶವನ್ನು ಮಾತ್ರ ನಿಮ್ಮ ಮಾನಸಿಕತೃಪ್ತಿಗಾಗಿ ಸದ್ವಿನಿಯೋಗಕ್ಕೆ ಎತ್ತಿಟ್ಟ ಹೆಚ್ಚು ಪ್ರಚಾರ- ಆಡಂಬರಗಳಿಲ್ಲದಂತೆ ನೀವು ಧಾರ್ಮಿಕಕಾರ್ಯಗಳನ್ನು ಮಾಡಬೇಕು. ಅದು ನಿಜವಾಗಿಯೂ ನಿಮ್ಮ ಪ್ರಯತ್ನಗಳಿಗೆಲ್ಲ ಶಕ್ತಿಸಾಮರ್ಥ್ಯಗಳನ್ನು ನೀಡುತ್ತದೆ. ಧರ್ಮಪ್ರಿಯರಲ್ಲದ ನಿಮ್ಮ ಸ್ನೇಹಿತರುಗಳನ್ನು ಕೂಡ ನೀವು ನಡೆಸುವ ಇಂಥ ಧಾರ್ಮಿಕಕಾರ್ಯಗಳಿಗೆ ಆಹ್ವಾನಿಸಬೇಡಿರಿ. ನಿಮ್ಮ ಹೃದಯದಲ್ಲಿ ದೇವರನ್ನೇ ನಂಬಿ, ಆಪ್ತರೂ ಆಸ್ತಿಕರೂ ಶ್ರದ್ಧಾವಂತರೂ ಆದ ಪರಿಜನರನ್ನು ಮಾತ್ರ ಕೂಡಿಸಿಕೊಂಡು ಏಕನಿಷ್ಠೆಯಿಂದ ಸತ್ಕರ್ಮಗಳನ್ನು ನಡೆಯಿಸಿರಿ. ದೇವರನ್ನೂ ಧಾರ್ಮಿಕವಿಧಿಗಳನ್ನೂ ಕೈಬಿಡುವದು ಮಾತ್ರ ಎಂದಿಗೂ ಸರಿಯಲ್ಲ. ಹಾಗೆಯೇ ನೀವು ಕೂಡ ಅವುಗಳ ಅನುಷ್ಠಾನವನ್ನು ಸಂಶಯಾತ್ಮರಾಗಿ ಮಾಡಕೂಡದು. ಭಕ್ತಿಶ್ರದ್ಧೆಗಳಿಂದಲೇ ನಡೆಸಬೇಕು.

ಇನ್ನು ಕಾರ್ಮಿಕರ ವಿಚಾರ. ಇವರುಗಳಿಗೆ ಈಚೆಗೆ ತಾವು ಶೋಷಣೆಗೆ ಒಳಗಾದವರೆಂಬ ಭಾವನೆಯು ಬಂದಿದೆ. ಕೆಲವಂಶಗಳಲ್ಲಿ ಇದು ನಿಜವೇ. ಈಗಲಂತೂ ಸರ್ಕಾರದವರು ಇವರ ರಕ್ಷಣೆಗಾಗಿ ಕಾಯಿದೆಗಳನ್ನು ನಿರ್ಮಿಸಿ ಇವರ ಕೈಗಳನ್ನು ಬಲಪಡಿಸಿದ್ದಾರೆ. ಆದರೇನು ? ಕಾರ್ಮಿಕನು ಹುಟ್ಟಿರುವದು ಕಾಯಕ ಕ್ಕಾಗಿಯೇ ಅಲ್ಲವೆ ? ಅವನು ಒಬ್ಬನಲ್ಲವಾದರೆ ಮತ್ತೊಬ್ಬ ಯಜಮಾನನ ಕೈಕೆಳಗಾದರೂ ದುಡಿಯಲೇಬೇಕು. ಎಲ್ಲರಿಗೂ ನಿಜವಾದ ಯಜಮಾನನು ಭಗವಂತನೇ. ಅವನ ರಾಜ್ಯದಲ್ಲಿ ಹಾಗೂ ಪ್ರಪಂಚವೆಂಬ ಕಾರ್ಯಾಗಾರದಲ್ಲಿ ಎಲ್ಲರೂ ಕಾರ್ಮಿಕರೇ ಸರಿ. ಅದಕ್ಕಾಗಿಯೇ ಬಸವಣ್ಣನವರು 'ಕಾಯಕವೇ ಕೈಲಾಸ'ವೆಂದರು. Work is Worship ಎಂದು ಆಂಗ್ಲ ಭಾಷೆಯನ್ನು ಬಲ್ಲವರು ಹೇಳಿದರು. "ಸ್ವಕರ್ಮಣಾ ತಮಭ್ಯರ್ಚ್ಯ" ಎಂದು ಭಗವಂತನು ನುಡಿದನು. ಎಲ್ಲಕ್ಕೂ ತಾತ್ಪರ್ಯವು ಒಂದೇ ಆಗಿದೆ. ಆದರೆ ಈಗಿನ ಕಾರ್ಮಿಕರಿಗೆ ಬಹಳಮಟ್ಟಿಗೆ ಸೋಮಾರಿತನವು ಬಂದಿದೆ. ಹಿಂದೆ ಒಬ್ಬ ಆಳು ಮಾಡುತ್ತಿದ್ದ ಕೆಲಸಕ್ಕೆ ಈಗ ನಾಲ್ಕು ಜನರಾದರೂ ಸಾಲದಾಗಿದೆ. ಇದರಿಂದ ಯಜಮಾನನಿಗೆ ವೆಚ್ಚವು ಹೆಚ್ಚಾಗಿಯೇ ತೀರುವದು. ಇನ್ನು ಆ ಯಜಮಾನನು ತೆರಿಗೆಗಳನ್ನೆಲ್ಲ ತೆತ್ತು, ಲೆಕ್ಕಗಳನ್ನು ನೀಡಿ, ದಲ್ಲಾಳಿಗಳನ್ನು ತೃಪ್ತಿಗೊಳಿಸಿ, ಸಾಲಗಾರರ ಬಡ್ಡಿ ಗಳನ್ನು ತೀರಿಸಿ ಬಂಡವಾಳವನ್ನು ಉಳಿಸಿಕೊಂಡರೆ ಅದೇ ಒಂದು ದೊಡ್ಡ ವಿಜಯ ವೆನಿಸುವದು. ಕಾರ್ಮಿಕರಿಗೆ ಈ ಕಷ್ಟಗಳು ತಿಳಿಯಲಾರವು. ಅವರಿಗೆ ಮುಖ್ಯ ವಾಗಿರುವದು ಹೊಟ್ಟೆಸಮಸ್ಯೆ. ಅನಂತರ ಮನರಂಜನೆ. ಇಷ್ಟು ಹೊರತು ಜವಾಬ್ದಾರಿಗಳಾಗಲೀ ಯಜಮಾನನ ತಲೆಯಲ್ಲಿ ತುಂಬಿರುವಂಥ ಚಿಂತೆಗಳಾಗಲಿ ಇರುವದಿಲ್ಲ. ಈ ತತ್ತ್ವಗಳನ್ನು ತಮ್ಮ ತಮ್ಮ ಹೃದಯಾಂತರಾಳದಿಂದ ಇಬ್ಬರೂ ಕಂಡುಕೊಂಡು ಸ್ವಾಮಿದ್ರೋಹಮಾಡದಂತೆ ಕಾರ್ಮಿಕನೂ ಕಾಯಕಕ್ಕೆ ತಕ್ಕ ಪ್ರತಿಫಲವನ್ನು ವಂಚನೆಯಿಲ್ಲದಂತೆ ಯಜಮಾನನೂ ನೀಡಿದಲ್ಲಿ ಯಜಮಾನನು "ರಾಮ"ನೇ ಆಗುವನು. ಕಾರ್ಮಿಕನು 'ಮಾರುತಿ' ಯಾಗುವನು. ಇಬ್ಬರೂ ಜಗತ್ಪೂಜ್ಯರಾಗುವರು. ಈ ಉಪದೇಶಗಳನ್ನು ಕೇಳುವವರಾರು ? ಯೋಚಿಸಿರಿ.

ಇನ್ನು ಯಜಮಾನನಿಗೂ ಕಾರ್ಮಿಕನಿಗೂ ನೇರವಾದ ಸಂಬಂಧವಿರಬೇಕೇ ಹೊರತು ಮಧ್ಯಸ್ಥಗಾರನ ಅಥವಾ "ಸಂಘ"ದ ಆವಶ್ಯಕತೆಯಿಲ್ಲವೆಂದೇ ನನ್ನ ಅಭಿಪ್ರಾಯ. ಏನೇ ಆಗಲಿ, ಕಾರ್ಮಿಕನನ್ನು ಕಷ್ಟದಲ್ಲಿ ಕೈಹಿಡಿಯುವ ಶಕ್ತಿ ಯಜಮಾನನಿಗೆ ಇದ್ದೀತೇ ಹೊರತು ಮಧ್ಯಸ್ಥನಿಗಿರುವದಿಲ್ಲ. ಆದ್ದರಿಂದ ಕಾರ್ಮಿಕನು ತನ್ನ ಜೀವನದಲ್ಲಿ ಸ್ವಾಮಿಭಕ್ತಿಯನ್ನು ಬೆಳೆಸಿಕೊಂಡಲ್ಲಿ ಯಜಮಾನನು ಅವನನ್ನು ಕಾಪಾಡುವನು. ಅಧ್ಯಾತ್ಮದೃಷ್ಟಿಯಿಂದ ಇಬ್ಬರ ಆತ್ಮನೂ ಒಂದೇ ಆಗಿರುವದರಿಂದ ಆತ್ಮಸ್ವರೂಪದ ಕಡೆಗೆ ವೃಷ್ಟಿಯನ್ನು ಹೊರಳಿಸಿದಂತೆಲ್ಲ ಇಬ್ಬರೂ ಹತ್ತಿರವಾಗುವರು. ಹಾಗಾದಂತೆಲ್ಲ ಆನಂದ-ಸುಖಗಳು ಸಮೃದ್ಧಿಯಾಗುವವು. ಜಗತ್ತೆಲ್ಲ ಅಧ್ಯಾತ್ಮ ದೃಷ್ಟಿಸಂಪನ್ನವಾಗಬೇಕೆಂದೇ ನನ್ನ ಆಸೆಯಾಗಿದೆ. ನಾನು ನಿಮಗೆ ಇನ್ನೇನು ಸಲಹೆಯನ್ನು ತಾನೆ ಕೊಡಬಲ್ಲೆನು ? ——

# ಆರಿಸಿದ ಅರಳುಮೊಗ್ಗುಗಳು

('ಯುಗಯಾತ್ರೀ ಭಾರತೀಯ ಸಂಸ್ಕೃತಿ'-ಎಂಬ ಮಹಾಗ್ರಂಥದಿಂದ)

೧. ಆಧ್ಯಾತ್ಮಿಕಜೀವನವೇ ಭಾರತದ ಸಹಜಪ್ರವೃತ್ತಿ. ಭಾರತೀಯನಿಗೆ ತುಂಬ ಮೆಚ್ಚಿಕೆಯಾಗುವವರು ಯುದ್ಧವಿಜೇತರಲ್ಲ; ಶ್ರೀಮಂತ ವಣಿಕರಲ್ಲ; ಅಥವಾ ಹಿರಿಯ ರಾಜಕಾರಣಿಗಳಲ್ಲ. ಆದರೆ ಮಹಾತ್ಮರಾದ ಋಷಿಗಳು; ಆಧ್ಯಾತ್ಮಿಕತೆಯ ಅತ್ಯಂತ ಶ್ರೇಷ್ಠ ಹಾಗೂ ಪರಿಶುದ್ಧರಾದ ತಪಸ್ವಿಗಳು; ಯೋಗಿಗಳು. ಭಾರತದ ಹೆಮ್ಮೆಯೆಂದರೆ ಚರಿತ್ರೆಗೆ ತಿಳಿದಿರುವಷ್ಟು ಹಿಂದಿನಕಾಲದಿಂದಲೂ ಹೆಚ್ಚುಕಡಿಮೆ ಪ್ರತಿಯೊಂದು ತಲೆಮಾರಿನಲ್ಲೂ ದೇಶದ ಪ್ರತಿಯೊಂದು ಭಾಗದಲ್ಲೂ ಭಾರತವು ಮಹಾತ್ಮರನ್ನು ಸೃಷ್ಟಿಸಿದೆ. ನಾಡಿನ ಅತ್ಯುತ್ತಮ, ಅತಿಪವಿತ್ರ- ಎನಿಸಿದ ಸಮಸ್ತವೂ ಮೂರ್ತೀಭವಿಸಿದ ಮಹಾತ್ಮರಾಗಿದ್ದಾರೆ, ಅವರು. ಸಾಮಾನ್ಯವಾಗಿ ಅವರು ಬದುಕಿನ ಮುಖ್ಯಪ್ರವಾಹದಿಂದ ದೂರವಾದವರಾದರೂ ಸಾಮಾನ್ಯಜನರೂ ಅವರಿಗೆ ಭಕ್ತಿಪೂರ್ವಕವಾದ ಗೌರವವನ್ನು ಅರ್ಪಿಸುತ್ತಾರೆ. ವೈಯುಕ್ತಿಕ ಹಾಗೂ ಸಾಮಾಜಿಕಜೀವನದಲ್ಲಿ ಎದುರಾಗುವ ಸಮಸ್ಯೆಗಳಿಗೆ ಅವರಿಂದ ಪರಿಹಾರವನ್ನು ಕೇಳಿ ಪಡೆಯುತ್ತಾರೆ. ಅಧಿಕಾರ, ಒಣಹೆಮ್ಮೆ, ಐಶ್ವರ್ಯ, ವೈಭವ- ಇವೆಲ್ಲವೂ ಆಧ್ಯಾತ್ಮಿಕಶಕ್ತಿಯ ಎದುರಿಗೆ ಏನೂ ಅಲ್ಲ-ಎಂಬುದನ್ನು ಅವರು ತಮ್ಮ ಬದುಕಿನಿಂದಲೇ ನಮಗೆ ಬೋಧಿಸುತ್ತಾರೆ. ತಮ್ಮ ಜೀವನವನ್ನು ತಿರಸ್ಕರಿಸಿದ ಅವರೇ ಜೀವನವನ್ನು ನಮ್ಮ ತಿರಸ್ಕಾರಕ್ಕಿಂತ ಬಹಳ ಎತ್ತರಕ್ಕೆ ಎತ್ತಿದವರಾದರು.

೨. ಧರ್ಮವು ಅನುಭವವಸ್ತು. ಅದು ವ್ಯಕ್ತಿಯ ಬೌದ್ಧಿಕಉಪಕರಣಗಳಿಗೆ ಹೊಸ ಸೇರ್ಪಡೆಯಲ್ಲ. ಒಂದು ವಿಶ್ವಾತ್ಮಕಚೇತನದ ಉನ್ನತಕ್ಷೇತ್ರಕ್ಕೆ ವ್ಯಕ್ತಿತ್ವವನ್ನು ಏರಿಸುವಿಕೆಯೇ ಅದು. ಅದು ಬ್ರಹ್ಮದರ್ಶನ, ಸತ್ಯವನ್ನು ಕುರಿತ ಒಳನೋಟ. ಅಜ್ಞೇಯವಾದ ಅದು ಸತ್ಯದ ನಿವಾಸಲುನಿಧಿ. ಬುದ್ಧಿಗೆ ನಿಲುಕಲಾರದ, ವ್ಯಾಕರಣತರ್ಕಗಳು ವಿವರಿಸಲಾಗದ, ಆದರೆ ತಮ್ಮ ಹಿಂದೆ ಇದೆಯೆಂದು ಅರಿಯುವ ಅದು ಇದೆ. ಎಲ್ಲಾ ಧರ್ಮಗಳಲ್ಲಿಯೂ ಗಹನತೆಯ ಅಂಶಗಳಿದ್ದೇ ಇವೆ. ಧಾರ್ಮಿಕಾನುಭವವು ನೈಜವಾಗಿದ್ದರೆ ಮಾತ್ರ ಸ್ಫುಟವಾಗಿರುತ್ತದೆ; ಆಗ ಅದು ನೇರವಾಗಿದ್ದು ನೂತನವೂ ಆನಂದದಾಯಕವೂ ಆಗಿರುತ್ತದೆ. ಅದರಲ್ಲಿ ಸತ್ಯದ ಪ್ರಭಾವವನ್ನು ನಾವು ಅನುಭವಿಸುತ್ತೇವೆ. ಅದು ಆಧ್ಯಾತ್ಮಿಕ ಆವಿಷ್ಕಾರವೇ ಹೊರತು ಸೃಷ್ಟಿಯಲ್ಲ. ಅನುಭವಿಗಳು ಧರ್ಮದ ಅಸ್ತಿತ್ವವನ್ನು ಅನುಭವಿಸುತ್ತಾರೆ. ಆದರೆ ಅದನ್ನು ಕುರಿತು ವಾದಮಾಡುವದಿಲ್ಲ ; ಧರ್ಮದಿಂದ ಆವಿರ್ಭವಿಸಿದ ಆನಂದದ ಪ್ರವಾಹದುಬ್ಬರದಲ್ಲಿ ಅವರ ಬದುಕಿನ ಹಳ್ಳಕೊಳ್ಳಗಳು ಮುಳುಗಿಹೋಗಿರುತ್ತವೆ. ಹೆಚ್ಚೇನು ಹೇಳುವದಿದೆ? ಧರ್ಮವೇ ದೇವರು.

**ಡಾ॥ ಎಸ್. ರಾಧಾಕೃಷ್ಣನ್.**

# ಜನತಾಸರ್ಕಾರ

(ಪತ್ರಿಕಾಪಾಠಕ)

ಇತ್ತೀಚಿನ ಶಾಸನಸಭೆಯ ಚುನಾವಣೆಯಲ್ಲಿ ಕರ್ನಾಟಕದಲ್ಲಿ ಜನತಾಸರ್ಕಾರವು ಆರಿಸಿಬಂದಿದ್ದು ಅದು 'ನುಡಿದಂತೆ ನಡೆದ ಪಕ್ಷ'- ಎಂಬ ಪ್ರಶಂಸೆಗೆ ಪಾತ್ರವಾಗಿದೆ. ಜನತಾಪಕ್ಷದ ನಾಯಕರೂ ಶಾಸಕರೂ ಉತ್ಸಾಹದಿಂದ ಜನತೆಯ ಕ್ಷೇಮಾಭ್ಯುದಯಗಳಿಗಾಗಿ ದುಡಿಯುವ ಪ್ರತಿಜ್ಞೆಯನ್ನು ಸ್ವೀಕರಿಸಿದ್ದಾರೆ. ಇವೆಲ್ಲ ಸಂತೋಷಕರವಾದ ವಿಚಾರಗಳೇ ಸರಿ. ಮುಂದೆಯೂ ಈ ಜನಪ್ರಿಯಸರ್ಕಾರವು ಇದೇ ಉತ್ಸಾಹ, ಶ್ರದ್ಧೆ, ಪ್ರಾಮಾಣಿಕತೆ, ತ್ಯಾಗ-ಮನೋಭಾವಗಳಿಂದ ದುಡಿದು ದೇಶಕ್ಷೇಮವನ್ನು ಸಾಧಿಸಲೆಂದು ಆಶಿಸೋಣ.

ಯಾವದೇ ಜನಪ್ರಿಯವಾದ ಅಭಿವೃದ್ಧಿಕಾರ್ಯಗಳನ್ನು ಸಾಧಿಸಿದಮೇಲೂ ಆಡಳಿತಪಕ್ಷವು ಕೈಗೊಳ್ಳಲೇಬೇಕಾದ ಒಂದು ಮುಖ್ಯ ಕರ್ತವ್ಯವಿದೆ. ಅದೇನೆಂದರೆ ಜನರನ್ನು ನೀತಿವಂತರನ್ನಾಗಿಯೂ ವಿವೇಕಿಗಳನ್ನಾಗಿಯೂ ವಿದ್ಯಾವಿನಯಸಂಪನ್ನರನ್ನಾಗಿಯೂ ಮತ್ತು ಆಧ್ಯಾತ್ಮಿಕದೃಷ್ಟಿಯುಳ್ಳವರನ್ನಾಗಿಯೂ ಮಾಡುವದು. ಇದು ಸಾಧ್ಯವಾಗಬೇಕಾದರೆ **ಜನರ ಬುದ್ಧಿಗೂ ಆಹಾರವನ್ನು ಕೊಡಬೇಕು.** ಕೇವಲ ಹೊಟ್ಟೆಬಟ್ಟೆಗಳ ಸಮಸ್ಯೆಗಳನ್ನು ಮಾತ್ರ ಪರಿಹರಿಸಿದರೆ ಸಾಲದು. ನಮ್ಮ ದೇಶದಲ್ಲಿ ವಿದ್ಯಾವಂತರು, ಓದುಬರಹಬಲ್ಲವರು- ಇಂಥವರ ಸಂಖ್ಯೆಗಿಂತ ಅನಕ್ಷರಸ್ಥರು, ಅವಿದ್ಯಾವಂತರೇ ಹೆಚ್ಚಾಗಿದ್ದಾರೆ. ಆದರೆ ಅವರೆಲ್ಲ ಬುದ್ಧಿಹೀನರಲ್ಲ. ಬುದ್ಧಿಯು ಪ್ರತಿಯೊಬ್ಬರಲ್ಲಿಯೂ ಜೀವಂತವಾಗಿದೆ. ಅದಕ್ಕೆ ಸರಿಯಾದ ಪ್ರಚೋದನೆಯನ್ನು ನೀಡಿ ಸದ್ಬುದ್ಧಿಯಾಗಿ ಪರಿಣಮಿಸುವಂತೆ ಮಾಡಿ ಆ ಮೂಲಕ ಸಮಾಜೋದ್ಧಾರವನ್ನು ಕೈಗೊಳ್ಳಬಹುದು. ಹಾಗೆ ಆಗಬೇಕಾದರೆ ಸದ್ಗ್ರಂಥಗಳ ಪ್ರಚಾರ, ಸದ್ವಿಚಾರಗಳ ವಿನಿಮಯ, ಮನರಂಜನೆಯನ್ನು ಎರಡನೆಯದಾಗಿಟ್ಟು ಬುದ್ಧಿಯ ಓರೆಕೋರೆಗಳನ್ನು ತಿದ್ದುವಂಥ ವಿಚಾರಗೋಷ್ಠಿಗಳು, ಪ್ರವಚನಗಳು, ಪುರಾಣವಾಚನಗಳು- ಮುಂತಾದದನ್ನು ದೇಶದಲ್ಲೆಲ್ಲ ಏರ್ಪಡಿಸಬೇಕು. ನಾಟಕ, ಸಿನೆಮ, ಭರತನಾಟ್ಯ, ಸಂಗೀತ, ಗಮಕ-ಇತ್ಯಾದಿ ಮಾಧ್ಯಮಗಳಿಂದಾರಂಭಿಸಿ **ವಿಚಾರಕರಿಗೂ ಬುದ್ಧಿಜೀವಿಗಳಿಗೂ ರುಚಿಸುವಂಥ ವಿದ್ವದ್ಗೋಷ್ಠಿಗಳು, ಆಧ್ಯಾತ್ಮಿಕಚಟುವಟಿಕೆಗಳನ್ನು ಬೆಳೆಯಿಸಿ ಪ್ರೋತ್ಸಾಹಿಸಬೇಕು.** ಇವುಗಳು ಯಾವದೇ ಮತಧರ್ಮಗಳನ್ನು ಅವಲಂಬಿಸದೆ ತತ್ತ್ವಪ್ರಧಾನವಾಗಿದ್ದು ಮಾನವಜನಾಂಗಕ್ಕೇ ಅನ್ವಯಿಸುವಂಥ ಉದಾತ್ತವಿಚಾರ- ಚಿಂತನ- ಸಾಧನಗಳಿಂದ ಕೂಡಿರಬೇಕು. ಜನತಾಸರ್ಕಾರವು ಇಂಥ ಸ್ತುತ್ಯಪ್ರಯತ್ನಗಳ ಕಡೆಗೆ ತನ್ನ ಗಮನವನ್ನೇನಾದರೂ ಹರಿಸೀತೆ? ಕಾದುನೋಡಬೇಕಾಗಿದೆ.

---

# ಚಿತ್ರಗಳ ಗೋಡೆಗಳು

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಹಾದಿಹೋಕನೊಬ್ಬನು ಆ ಮನೆಯ ಕಡೆಗೆ ತಿರುಗಿನೋಡಿದನು. ಗೋಡೆಗಳು ಅವನ ಕಣ್ಣುಗಳನ್ನು ಸೆರೆಹಿಡಿದಿಟ್ಟವು. ಎಷ್ಟುಪ್ರಯತ್ನಪಟ್ಟರೂ ಅವನು ಕಣ್ಣುಗಳನ್ನು ಇತ್ತ ತಿರುಗಿಸುವದಕ್ಕೆ ಆಗಲಿಲ್ಲ. ಗೋಡೆಗಳ ಮೇಲೆ ವಿವಿಧ ಚಿತ್ರಗಳಿದ್ದವು; ಅವುಗಳು ಬಗೆಬಗೆಯ ಬಣ್ಣಗಳಲ್ಲಿ ಬರೆಯಲ್ಪಟ್ಟಿದ್ದವು. "ಈ ಮನೆಯ ಯಜಮಾನನು ಯಾರಿರಬಹುದು? ಅವನಿಗೆ ಎಲ್ಲಾ ರಸಗಳಲ್ಲಿಯೂ ಆದರವಿದೆ-ಎಂದು ಕಾಣಿಸುತ್ತದೆ. ಇಲ್ಲಿರುವ ವೀರರ ಚಿತ್ರಗಳು, ಸುಂದರಸ್ತ್ರೀಯರ ಬೆಡಗುಗಳ ಪ್ರದರ್ಶನ, ಬೀಭತ್ಸದೃಶ್ಯಗಳು, ಶಾಂತರಸವನ್ನು ಮುಖದಲ್ಲಿ ಚಿಮುಕಿಸುವ ಮಹರ್ಷಿಯರ ನಿದರ್ಶನ, ಎಲ್ಲವೂ ಇವೆ"- ಎಂದುಕೊಂಡನು.

ಸರಿ, ಆತನು ಅಲ್ಲಿಯೇ ಕ್ಷಣಹೊತ್ತು ಚಿತ್ರಗಳನ್ನು ನಿಟ್ಟಿಸಿ ನೋಡಿದನು. ಬಳಿಕ ಕುತೂಹಲದಿಂದ ಆ ಮನೆಯ ಕಡೆಗೆ ಹೆಜ್ಜೆಹಾಕಿದನು. ಅದೃಷ್ಟಕ್ಕೆ ಬಾಗಿಲು ತೆರೆದೇ ಇತ್ತು. ಆದರೆ ಒಳಗೆ ಯಾರೊಬ್ಬರೂ ಮಾತನಾಡುವ ಸದ್ದು ಕಾಣಿಸಲಿಲ್ಲ. ಅವನ ಕೌತುಕವು ಇಮ್ಮಡಿಸಿತು. 'ಈ ವಿಚಿತ್ರಗೃಹದ ನಿವಾಸಿಗಳು ಯಾರೊ? ಈ ಕುಟುಂಬದ ಯಜಮಾನರು ಯಾರೊ? ತಿಳಿದುಕೊಳ್ಳಲೇಬೇಕು' ಎಂದು ಬೇಗಬೇಗನೆ ನಡೆದನು.

ಹಾದಿಹೋಕನು ಸ್ವಲ್ಪ ಅಂಜಿಕೆಯಿಂದ ಮೆಲ್ಲಗೆ ಇಣಿಕಿ ನೋಡಿದನು. ಯಾರೂ ಕಾಣಿಸಲಿಲ್ಲ. ಮೆಲ್ಲನೆ ಸದ್ದುಮಾಡದೆ ಒಳಕ್ಕೆ ನಡೆದನು. ಈಗ ಸ್ವಲ್ಪ ಧೈರ್ಯವನ್ನು ಮಾಡಿ ತೀರ ಒಳಕ್ಕೆ ಹೋದನು. ಅಲ್ಲಿ ಕಾಣಿಸಿದ್ದೇನು? ಎರಡು ಮೂರು ಅಮೃತಶಿಲೆಯ ವಿಗ್ರಹಗಳು. ಅವು ನೋಡುವದಕ್ಕೇನೋ ಸುಂದರವಾಗಿದ್ದವು. ಆದರೆ ಒಳಗೆ ಮಾತನಾಡುವವರಾರೂ ಇರಲಿಲ್ಲವಾದ್ದರಿಂದ ಆ ಭೀಕರನಿಶ್ಶಬ್ದತೆಯಲ್ಲಿ ಆ ವಿಗ್ರಹಗಳನ್ನು ನೋಡಿನಲಿಯುವದು ಅವನಿಂದಾಗಲಿಲ್ಲ. ನಿರಾಶನಾಗಿ ಪೆಚ್ಚುಮೊಗವನ್ನು ಹಾಕಿಕೊಂಡು ಬಂದುಬಿಟ್ಟನು.

"ಈಗಿನ ನಮ್ಮ ಸಮಾಜವೆಂಬುದು ಒಂದು ಭವ್ಯಭವನ. ಅದರ ಹೊರಗಡೆ ಸುಂದರಚಿತ್ರಗಳಿವೆ. ಅವುಗಳನ್ನು ನೋಡಿದರೆ ಅಲ್ಲಿರುವ ವ್ಯಕ್ತಿಗಳು ಎಂಥ ಗಣ್ಯಪುರುಷರಾಗಿರಬೇಕು! ಇವರ ವೇಷ, ಭಾಷೆ, ವಿದ್ಯೆ, ಜೀವನಪದ್ಧತಿ, ಉದ್ಯೋಗ, ಕಲಾಕೌಶಲ್ಯ, ರಾಜನೀತಿ-ಇವೆಲ್ಲ ವಿದ್ಯುದ್ವೇಗದಿಂದ ಮುಂದುವರೆಯುತ್ತಿರುವಂತೆ ಕಾಣುತ್ತಿವೆ. ಆದರೆ ಇವರುಗಳಲ್ಲಿ ಜೀವಂತರಾದ ಆತ್ಮರುಗಳೇ ಕಾಣುತ್ತಿಲ್ಲ. ನಿತ್ಯಪುರುಷಾರ್ಥದಲ್ಲಿ ಶ್ರದ್ಧೆಯಿಲ್ಲ. ಈಶ್ವರನಲ್ಲಿ ಭಕ್ತಿಯಿಲ್ಲ. ಗುರುಗಳಲ್ಲಿ ಆದರವಿಲ್ಲ. ಆ ದೃಷ್ಟಿಯಿಂದ ಇವರೆಲ್ಲ ಶಿಲಾಪ್ರತಿಮೆಗಳೇ ಆಗಿರುತ್ತಾರೆ. ಅಯ್ಯೋ, ಇವರಿಗೆ ಶ್ರೇಯಸ್ಸು ಹೇಗಾದೀತು?" ಎಂದುಕೊಳ್ಳುತ್ತಾ ಆ ಹೊಸಬನು ತನ್ನ ಹಾದಿಯನ್ನು ಹಿಡಿದನು.

# ನಿಜವಾದ ಸ್ಪರ್ಶಮಣಿ

(ಪೂಜ್ಯ ಡೋಂಗರೆ ಮಹಾರಾಜರ ಪ್ರವಚನದಿಂದ)

'ಸ್ಪರ್ಶಮಣಿ'ಯೆಂಬ ಅಪರೂಪದ ವಸ್ತುವೊಂದಿದೆಯಂತೆ. ಅದನ್ನು ಕಬ್ಬಿಣಕ್ಕೆ ತಗುಲಿಸಿದರೆ ಚಿನ್ನವಾಗುತ್ತದೆಯಂತೆ. ಈ ಸಂಗತಿಯು ಒಬ್ಬ ಗೃಹಸ್ಥನಿಗೆ ತಿಳಿಯಿತು. ಅವನು ಅದು ಯಾರಲ್ಲಿರಬಹುದೆಂದು ಹುಡುಕುತ್ತಿರುವಲ್ಲಿ ಗಂಗಾತೀರದ ಕುಟೀರದಲ್ಲಿರುವ ಒಬ್ಬ ಸಾಧುವಿನ ಬಳಿ ಇರುವದಾಗಿ ತಿಳಿಯಿತು. ಏನಾದರೂ ಪ್ರಯತ್ನಮಾಡಿ ಅದನ್ನು ಪಡೆಯಬೇಕೆಂದು ಅವನು ಸಾಧುವನ್ನು ಬಳಿಸಾರಿದನು. ಸಾಧುಸೇವೆಯಲ್ಲಿ ತೊಡಗಿದನು. ಸಾಧುವಿಗೂ ಆತನ ವಿಷಯದಲ್ಲಿ ಕನಿಕರವುಂಟಾಯಿತು. ಸಮಯವರಿತು ತನ್ನ ಆಶೆಯನ್ನು ಗೃಹಸ್ಥನು ಸಾಧುವಿನಲ್ಲಿ ನಿವೇದಿಸಿಕೊಂಡನು. ಸಾಧುವು "ಆಗಬಹುದು ; ಆ ಮಣಿಯು ನನ್ನಲ್ಲಿದೆ; ನಿಜ. ಸ್ವಲ್ಪ ಕಾಲಾನಂತರ ನಿನಗೆ ಕೊಡಲಿರುವೆನು" ಎಂದನು.

ಗೃಹಸ್ಥನಿಗೆ ಕುತೂಹಲವನ್ನು ತಡೆಯಲಾಗಲಿಲ್ಲ. ಒಂದೆರಡು ದಿನಗಳ ಅನಂತರ ಸಾಧುವು ಕುಟೀರದಲ್ಲಿಲ್ಲದ ಸಮಯವನ್ನು ಸಾಧಿಸಿ ಸ್ಪರ್ಶಮಣಿಯನ್ನು ಹುಡುಕಿ ತೆಗೆದನು. ಅದು ಒಂದು ಹಳೆಯ ಡಬ್ಬಿಯಲ್ಲಿ ಅರಿವೆಯಿಂದ ಸುತ್ತಲ್ಪಟ್ಟು ಗೋಪ್ಯವಾಗಿ ಇಡಲ್ಪಟ್ಟಿತ್ತು. ಆದರೆ ಗೃಹಸ್ಥನಿಗೆ ಅದು ಸ್ಪರ್ಶಮಣಿ ಹೌದೊ, ಅಲ್ಲವೊ-ಎಂಬ ಸಂಶಯವುಂಟಾಯಿತು. ಏಕೆಂದರೆ ಅದನ್ನಿಟ್ಟಿದ್ದ ಡಬ್ಬಿಯು ಚಿನ್ನವಾಗಿ ಮಾರ್ಪಡದೆ ಹಾಗೇ ಕಬ್ಬಿಣದ್ದೇ ಆಗಿತ್ತು. ಗೃಹಸ್ಥನು ಸಾಧುವು ಬಂದಕೂಡಲೆ ತಾನು ಮಾಡಿದ್ದ ಕೆಲಸವನ್ನು ತಿಳಿಸಿ ತಪ್ಪನ್ನು ಕ್ಷಮಿಸುವಂತೆ ಕೇಳಿಕೊಂಡನು. ಮತ್ತು 'ಪೂಜ್ಯರೆ, ಸ್ಪರ್ಶಮಣಿಯ ಸಾನ್ನಿಧ್ಯವಿದ್ದರೂ ಡಬ್ಬಿಯೇಕೆ ಬಂಗಾರವಾಗಲಿಲ್ಲ?' ಎಂದು ಕೇಳಿಯೇಬಿಟ್ಟನು.

ಸಾಧುವಿಂತೆಂದನು : "ಅಯ್ಯ, ಅದು ಬಟ್ಟೆಯಿಂದ ಸುತ್ತಲ್ಪಟ್ಟಿರುವವರೆಗೂ ತನ್ನ ಶಕ್ತಿಯನ್ನು ತೋರಿಸಲಾರದು. ಅಷ್ಟೇ ಅಲ್ಲ. ಅದನ್ನಿರಿಸಿದ್ದ ಡಬ್ಬಿಗೆ ತನಗೂ ಸ್ಪರ್ಶಮಣಿಗೂ ನಡುವೆ ಬಟ್ಟೆಯೆಂಬ ಆವರಣವಿರುವದಾಗಲಿ, ಅದು ತೆಗೆಯಲ್ಪಟ್ಟರೆ ತಾನು ಚಿನ್ನವಾದೇನೆಂಬುದಾಗಲಿ ತಿಳಿಯುವಂತಿಲ್ಲ. ಹಾಗೆಯೇ ನಿನ್ನ ಶರೀರವು ಡಬ್ಬಿಯ ಸ್ಥಾನದಲ್ಲಿರುತ್ತದೆ. ನಿನ್ನೊಳಗಿರುವ ಅಂತರಾತ್ಮನೇ ಸ್ಪರ್ಶಮಣಿಯಾಗಿರುತ್ತಾನೆ. ಅಜ್ಞಾನವೆಂಬ ಆವರಣವು ನಿನ್ನನ್ನೂ ಸ್ಪರ್ಶಮಣಿ ಮಣಿಯನ್ನೂ ಬೇರ್ಪಡಿಸಿದೆ. ನೀನು ಈ ಆವರಣವನ್ನು ಶಾಸ್ತ್ರಾಚಾರ್ಯರುಗಳ ಉಪದೇಶದಿಂದ ಕಳೆದುಕೊಳ್ಳಬೇಕು. ಆದರೆ ಉಪದೇಶಮಾತ್ರದಿಂದ ಆವರಣವು ಹೋಗುವದಿಲ್ಲ. ಅದನ್ನು ಭಕ್ತಿಯೆಂಬ ಪ್ರದೀಪದಿಂದ ನಾಶಗೊಳಿಸಬೇಕು. ಆಗ ಸ್ಪರ್ಶಮಣಿಯ ಪ್ರಭಾವವು ನಿನ್ನ ಮೇಲಾಗುವದು- ಎಂದರೆ ಭಗವಂತನ ಸ್ಪರ್ಶಮಾತ್ರದಿಂದ ನೀನು ದೇಹಾತ್ಮಾಭಿಮಾನದಿಂದ ಮುಕ್ತನಾಗಿ ಕೃತಕೃತ್ಯನಾಗುವೆ" ಎಂದನು. ಅನಂತರ ಗೃಹಸ್ಥನಿಗೆ ನಿಜವಾದ ಸ್ಪರ್ಶಮಣಿಯ ರಹಸ್ಯವು ತಿಳಿಯಿತು- ಕೃತಕೃತ್ಯನಾದನು.

# ವಿಶ್ವಸ್ಯ ಹಿ ಪ್ರೇಷಿತೋ ರಕ್ಷಸಿ

( ಆಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು )

ಸೌರಸೂಕ್ತಮಂತ್ರಗಳ ವಿಚಾರಸರಣಿಯಲ್ಲಿ ಈಗ ಋಗ್ವೇದದ ೭-೮-೧೨-೫ ನ್ನು ವಿಚಾರಮಾಡೋಣ :

**ಓಂ ॥ ವಿಶ್ವಸ್ಯ ಹಿ ಪ್ರೇಷಿತೋ ರಕ್ಷಸಿ ವ್ರತಮಹೇಳಯನ್**
**ಉಚ್ಚರಸಿ ಸ್ವಧಾ ಅನು । ಯದದ್ಯ ತ್ವಾ ಸೂರ್ಯೋಪ-**
**ಬ್ರವಾಮಹೈ ತಂ ನೋ ದೇವಾ ಅನುಮಂಸೀರತ ಕ್ರತುಮ್ ॥**

"ಎಲೈ ಸೂರ್ಯನೆ, ನೀನು ಸಿಟ್ಟುಗೊಳ್ಳದೆ ಪ್ರಪಂಚದಲ್ಲಿರುವ ಎಲ್ಲಾ ಯಜ್ಞಕರ್ತೃಗಳ ಕರ್ಮವನ್ನೂ ಕಾಪಾಡುತ್ತಿರುವೆ. ಹವಿರರ್ಪಣೆಯನ್ನನುಸರಿಸಿ ಮೇಲಕ್ಕೇರುತ್ತಿರುವೆ. ಈಗ ಎಂದರೆ ಈ ದಿನ ನಾವು ನಿನ್ನನ್ನು ಸ್ತುತಿಸುವೆವಾದರೆ ಆಗ ಇಂದ್ರಾದಿದೇವತೆಗಳು ಯಜ್ಞವನ್ನು ಅಂಗೀಕರಿಸುವವರಾಗುವರು."

ಈ ಮಂತ್ರದಲ್ಲಿ ಸೂರ್ಯನನ್ನು ಯಜ್ಞರಕ್ಷಕನೆಂದೂ ಇಂದ್ರಾದಿದೇವತೆಗಳು ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸುವಂತೆ ಪ್ರೇರಿಸುವವನೆಂದೂ ಹೊಗಳಿರುತ್ತದೆ. ಬಹಳಮಟ್ಟಿಗೆ ಯಜ್ಞಗಳೆಲ್ಲವೂ ಹಗಲಿನಲ್ಲಿಯೇ ನಡೆಯುತ್ತವೆ. ಏಕೆಂದರೆ ಸೂರ್ಯನ ಸಾನ್ನಿಧ್ಯವಿದ್ದಾಗ ಯಜ್ಞಕ್ಕೆ ವಿಘ್ನಮಾಡುವ ರಾಕ್ಷಸರು ಬರುವದಿಲ್ಲ. ಆದರೆ ಹಗಲುಹೊತ್ತಿನಲ್ಲಿಯೂ ರಾಕ್ಷಸರು ಯಜ್ಞವಿಘ್ನಕಾರಕರಾದದ್ದು ರಾಮಾಯಣಾದಿಗಳಲ್ಲಿ ಪ್ರಸಿದ್ಧವಾಗಿದೆಯಲ್ಲ? ಎಂದರೆ ಅವು ವಿಶೇಷಸಂದರ್ಭಗಳೇ ಸರಿ. ಬಹಳಮಟ್ಟಿಗೆ ರಾತ್ರಿವೇಳೆಯಲ್ಲೇ ರಾಕ್ಷಸಸಂಚಾರವಿರುವದರಿಂದ ಯಾಗಾದಿಗಳನ್ನಾಗಲಿ, ಸತ್ಕರ್ಮಗಳನ್ನಾಗಲೀ ಶಿಷ್ಟರು ರಾತ್ರಿಯಲ್ಲಿ ಮಾಡುವದಿಲ್ಲ. ಸೂರ್ಯೋದಯಾನಂತರವೇ ಮಾಡುತ್ತಾರೆ. ರಾತ್ರಿಯಲ್ಲಿ ಮಾಡುವ ಯಜ್ಞಗಳು ಶತ್ರುನಾಶಾದಿಫಲವುಳ್ಳ ಆಭಿಚಾರಿಕಕ್ರಿಯೆಗಳಾಗಿರುವವು. ಅವು ಶಿಷ್ಟಪರಿಗೃಹೀತವಲ್ಲ. ಆದ್ದರಿಂದ ಸೂರ್ಯನ ಬೆಳಕು ಹರಿದಕೂಡಲೆ ಯಜ್ಞ-ಆಹ್ನಿಕ-ವ್ರತ-ಪರ್ವಾದಿ ಪುಣ್ಯಕೆಲಸಗಳು ಆರಂಭವಾಗುವವು. ಅಂಥ ಸತ್ಕರ್ಮಗಳನ್ನು ಮಾಡುವ ಯಜಮಾನರುಗಳನ್ನೆಲ್ಲ ಸೂರ್ಯನು ತನ್ನ ಸಾನ್ನಿಧ್ಯದಿಂದ ಅನುಗ್ರಹಿಸುವನು. ಅವನಿಗೆ ಬೇಸರವಿಲ್ಲ; ಕೋಪವಿಲ್ಲ. ಆತನು ಎಲ್ಲರಿಗೂ **ಮಿತ್ರ**ನೆಂದೇ ಪ್ರಸಿದ್ಧನಾಗಿರುವನು. ಋಷಿಯು ಈ ಮಂತ್ರದಲ್ಲಿ ಲೋಕಮಿತ್ರನಾದ ಸೂರ್ಯನನ್ನು ಹೊಗಳಿ ಕರ್ಮರಕ್ಷಕನೆಂದು ಸ್ತುತಿಸಿರುತ್ತಾನೆ. ಯಜಮಾನರುಗಳು ಆವನಿಗೆ ಅರ್ಪಿಸುವ ಹವಿಸ್ಸನ್ನು ಸ್ವೀಕರಿಸಿ ಆತನು ಮುಂದೆ ಸಾಗುತ್ತಿರುವನು. ಇದರಿಂದ ಕಾಲಚಕ್ರ ಪರಿವರ್ತನವಾಗುವದು. ಹೀಗೆ ಸೂರ್ಯನ ಉದಯದಿಂದ ಪ್ರಾರಂಭವಾದ ಹಾಗೂ ಅನುಜ್ಞಾತವಾದ ಕರ್ಮಗಳನ್ನೇ ಇಂದ್ರಾದಿದೇವತೆಗಳು ಅಂಗೀಕರಿಸಿ ತಮ್ಮತಮ್ಮ ಹವಿರ್ಭಾಗಗಳನ್ನು ಸ್ವೀಕರಿಸುವರು. ಯಜ್ಞವನ್ನು ಪರಿಪೂರ್ತಿಗೊಳಿಸುವರು.

ಈಗ ಮುಂದಿನ ಮಂತ್ರವನ್ನು ವಿಚಾರಮಾಡೋಣ ;

**ಓಂ ॥ ಶಂ ನೋ ದ್ಯಾವಾಪೃಥಿವೀ ತನ್ನ ಆಪ ಇಂದ್ರಃ ಶೃಣ್ವನ್ತು ಮರುತೋ ಹವಂ ವಚಃ । ಮಾ ಶೂನೇ ಭೂಮ ಸೂರ್ಯಸ್ಯ ಸಂದೃಶಿ ಭದ್ರಂ ಜೀವಂತೋ ಜರಣಾಮಶೀಮಹಿ ॥**

“ದ್ಯಾವಾಪೃಥಿವಿಗಳೂ ಅಬ್ದೇವತೆಗಳೂ, ಇಂದ್ರನೂ, ಮರುದ್ದೇವತೆಗಳೂ ನಮ್ಮ ಆಹ್ವಾನದ ಮಾತುಗಳನ್ನು ಕೇಳುವವರಾಗಲಿ ! ಮತ್ತು ನಾವು ಸೂರ್ಯನ ಸಂದರ್ಶನನಿಮಿತ್ತವಾಗಿ ದುಃಖಿಗಳಾಗದೆ ಇರೋಣ! ಮತ್ತು ಬಹುಕಾಲ ಬದುಕಿದ್ದವರಾಗಿ ಮಂಗಳವನ್ನು ಕಂಡು ವೃದ್ಧರಾಗಿ ಬಾಳೋಣ !”

ಈ ಮಂತ್ರದಲ್ಲಿ ಸೂರ್ಯನ ಜೊತೆಗೆ ದ್ಯುಲೋಕದೇವತಾದಿಗಳನ್ನೂ ಕುರಿತು ಪ್ರಾರ್ಥಿಸಲಾಗಿದೆ. ಮನುಷ್ಯನ ಆಯುಷ್ಯವು ದೇವತೆಗಳ ದೃಷ್ಟಿಯಿಂದ ತೀರ ಮೊಟಕಾಗಿರುವದು. ಆದರೇನು? ದೀರ್ಘಕಾಲದ ಬಾಳಿಗಿಂತಲೂ ಬಾಳಿನ ಅವಧಿಯನ್ನೆಲ್ಲ ಶುಭಕರವಾದ ಕರ್ಮಗಳಿಂದಲೂ ಆಲೋಚನೆಗಳಿಂದಲೂ ಕಳೆಯುತ್ತಾ ಶರೀರಾವಯವಸೌಷ್ಠವವುಳ್ಳವರಾಗಿದ್ದು ದೇವತಾರಾಧನೆಗಳಿಗಾಗಿ ದೇಹೇಂದ್ರಿಯ ಸಂಘಾತಗಳನ್ನು ಬಳಸುತ್ತಿದ್ದರೆ ಸಾಕು. ಅದಕ್ಕಿಂತ ಮಿಗಿಲಾದ ಭಾಗ್ಯವಿರುವದಿಲ್ಲ. ನಮ್ಮ ಆಯುಷ್ಯದ ಎಲ್ಲಾ ದಿನಗಳೂ ಸೂರ್ಯೋದಯದಿಂದಲೇ ಪ್ರಾರಂಭವಾಗುತ್ತವೆ. ಆದರೂ ದಿನಗಳೆಲ್ಲವನ್ನೂ ನಾವು ದೇವತಾರಾಧನೆಯನ್ನುಮಾಡುತ್ತಾ “ಸುದಿನ”ಗಳಾಗಿ ದಾಟುವದು ಅಪರೂಪವೇ ಸರಿ. ಆದರೆ ದೇವತೆಗಳು ಅನುಗ್ರಹ ಮಾಡಿದರೆ ದಿನದಿನವೂ ‘ಸುದಿನ’ವೇ ಆಗಲಿದೆ. ಅದಕ್ಕಾಗಿ ಋಷಿಯು ಇಲ್ಲಿ ದ್ಯುಲೋಕದೇವತೆ, ಪೃಥಿವೀದೇವತೆ, ಜಲದೇವತೆ, ಇಂದ್ರ–ಮರುದ್ದೇವತೆಗಳನ್ನು ಆಹ್ವಾನಿಸುತ್ತಾ ತನ್ನ ಸ್ತುತಿರೂಪವಾದ ಕಲ್ಯಾಣವಾಕ್ಕುಗಳನ್ನು ಕೇಳಬೇಕೆಂಬ ಪ್ರಾರ್ಥನೆಯನ್ನು ಮುಂದಿಟ್ಟಿರುತ್ತಾನೆ. ಮತ್ತೆಮತ್ತೆ ದೇವತೆಗಳನ್ನು ಕರೆಯಲು ನಿಮಿತ್ತವೇನಾದರೂ ಇರಬೇಕು. ಆ ನಿಮಿತ್ತವನ್ನು ಕಾಲರೂಪಿಯಾದ ಸೂರ್ಯನು ಒದಗಿಸಿಕೊಡುವನು. ಸೂರ್ಯನ ಉದಯವೇ ದೇವತಾಹ್ವಾನಕ್ಕೆ ನಿಮಿತ್ತವು. ಆತನ ಸಂಚಾರವೇ ಕಾಲಗಣನೆಗೆ ಮೂಲವು. ಸದಾಕಾಲವೂ ನಾವು ದೇವತಾರಾಧನತತ್ಪರರಾಗಿರಬೇಕಾದರೆ ಸೂರ್ಯನು ನಮಗೆ ಪ್ರಾಣರೂಪದಿಂದ ಅನುಗ್ರಹಿಸಬೇಕು. ಆ ಪ್ರಾಣನೇ ಇಂದ್ರಿಯಗಳು, ವಾಕ್ಕು, ಮನಸ್ಸುಗಳಿಗೆ ಚೇತನವನ್ನೂ ಶಕ್ತಿಯನ್ನೂ ತುಂಬಬೇಕು. ಹೀಗೆ ಪ್ರಾಣರೂಪಿಯಾದ ಆದಿತ್ಯನು ತನ್ನ ಅನುಗ್ರಹದಿಂದ ಜೀವರುಗಳ ಜೀವವನ್ನು ಮಂಗಳಮಯವಾಗಿರಿಸುವನು. ವಾರ್ಧಕ್ಯವು ಶರೀರಕ್ಕೆ ಬರುವದು ಸ್ವಭಾವವಾದರೂ ಮನಸ್ಸಿಗೆ ವಾರ್ಧಕ್ಯವಾಗಲಿ, ಬೇಸರವಾಗಲಿ–ಉಂಟದಿರಬೇಕಾದರೆ ಸೂರ್ಯೋಪಾಸನೆಯನ್ನು ಮಾಡಿರಬೇಕು. ಆಗ ನಾವು ಸಾರ್ಥಕಬಾಳನ್ನು ಅನುಭವಿಸಿದವರಾಗುವೆವು. ಹಾಗಾಗಲಿ! ಎಂದು ಇಲ್ಲಿ ಕೇಳಲಾಗಿದೆ.

ಈಗ ಮುಂದಿನ ಮಂತ್ರವನ್ನು ವಿಚಾರಮಾಡೋಣ-

**ಓಂ ॥ ವಿಶ್ವಾಹಾ ತ್ವಾ ಸುಮನಸಃ ಸುಚಕ್ಷಸಃ ಪ್ರಜಾವಂತೋ ಅನಮೀವಾ ಅನಾಗಸಃ । ಉದ್ಯಂತಂ ತ್ವಾ ಮಿತ್ರಮಹೋ ದಿವೇ ದಿವೇ ಜ್ಯೋಗ್ಜೀವಾಃ ಪ್ರತಿಪಶ್ಯೇಮ ಸೂರ್ಯ ॥**

"ಎಲೈ ಸೂರ್ಯನೆ, ನಿನ್ನನ್ನು ನಾವು ಪ್ರೀತಿಯುಕ್ತವಾದ ಮನಸ್ಸಿನಿಂದಲೂ, ಒಳ್ಳೆಯ ನೋಟದಿಂದಲೂ, ಪುತ್ರಾದಿಸಂಪದ್ಯುಕ್ತರಾಗಿಯೂ ರೋಗವಿಲ್ಲದವರಾಗಿಯೂ ಅಪರಾಧಗಳಿಲ್ಲದವರಾಗಿಯೂ ಯಾವಾಗಲೂ ಆರಾಧಿಸುವಂತಾಗಲಿ! ಮತ್ತು ಎಲೈ ಮಿತ್ರರಿಗೆ ಪೂಜಾರ್ಹನೆ, ನಾವು ಪ್ರತಿದಿನವೂ ಹುಟ್ಟುತ್ತಿರುವ ನಿನ್ನನ್ನು ದರ್ಶನಮಾಡುತ್ತಾ ಬದುಕುವವರಾಗೋಣ!"

ಈ ಮಂತ್ರದಲ್ಲಿ ಪ್ರತಿದಿನವೂ ನಾವು ಸೂರ್ಯದರ್ಶನಮಾಡೋಣ- ಎಂಬ ಪ್ರಾರ್ಥನೆಯೂ ಅನಂತರ ಆತನ ಆರಾಧನೆಯನ್ನು ವಿಶಿಷ್ಟವಾಗಿ ಮಾಡೋಣವೆಂಬ ಹಾರೈಕೆಯೂ ಇದೆ. ಮನುಷ್ಯರೆಲ್ಲರಿಗೂ ಪ್ರತಿದಿನವೂ ಬೆಳಗ್ಗೆ ಸೂರ್ಯನು ಕಾಣಿಸಿಕೊಳ್ಳಲಾರಂಭಿಸಿ ಅಸ್ತಮಾನಕಾಲದವರೆಗೂ ದೃಗ್ಗೋಚರನೇ ಆಗಿರುತ್ತಾನೆ. ಹೀಗಿರುವಲ್ಲಿ ಈ ಪ್ರಾರ್ಥನೆಯಲ್ಲಿರುವ ವಿಶೇಷವೇನು ? ಎಂದು ಯಾರಾದರೂ ಕೇಳಬಹುದಾಗಿದೆ. ಸೂರ್ಯನು ಎಲ್ಲರಿಗೂ ಕಾಣಿಸುವದೇನೋ ನಿಜ. ಆದರೆ ಆತನನ್ನು ಕಂಡಾಗ ಎಷ್ಟು ಜನರಿಗೆ ಆತನು ದೇವತೆಯೆಂದೂ ಜೀವನಾಧಾರನೆಂದೂ ಪೂಜ್ಯನೆಂದೂ ಮನಸ್ಸಿಗೆ ಬಂದೀತು ? ಹಾಗೆ ಬಾರದೆ ಇರುವವರಿಗೆ ಸೂರ್ಯೋದಯವಾದಂತೆಯೇ ಅಲ್ಲ. ಅಂತರಂಗದಲ್ಲಿ ಜ್ಞಾನ ಸೂರ್ಯನು ಉದಯಿಸದೆ ಬಹಿರಂಗದಲ್ಲಿ ಸೂರ್ಯನ ಬೆಳಕುಕಂಡಮಾತ್ರಕ್ಕೆ ಪುರುಷಾರ್ಥವು ದೊರಕೀತೆ ? ಪ್ರಾಕೃತಜನರ ಪಾಡು ಇಷ್ಟೇ. ಕೆಲವರಿಗೆ ಆಯಾ ದಿನ ಯಾವ ತಿಥಿ, ಮಾಸ, ನಕ್ಷತ್ರಗಳೆಂಬುದೇ ತಿಳಿದಿರುವದಿಲ್ಲ. ವಾರವು ಮಾತ್ರ ಸಾಮಾನ್ಯವಾಗಿ ನೆನಪಿರುತ್ತದೆ. ಅದು ಕೂಡ ಸೂರ್ಯನಿಗಾಗಿ ಅಲ್ಲ. ಲೌಕಿಕ ನಿಮಿತ್ತಕ್ಕಾಗಿ- ಎಂದೇ ಹೇಳಬೇಕು. ಏಕೆಂದರೆ ಬಹುಜನರಿಗೆ ಭಾನುವಾರದ ನೆನಪು 'ರಜಾ' ನಿಮಿತ್ತವಾಗಿ ಮಾತ್ರವೇ ಇರುವದು. ಆ ದಿನವೇ ಅವರು ತಡವಾಗಿ ಏಳುತ್ತಾರೆ. ಸೋಮಾರಿಗಳಾಗಿ ಕಾಲಹಾಕುತ್ತಾರೆ; ಮನರಂಜನೆ, ಭೋಗ ವಿಲಾಸಗಳಲ್ಲಿ ಕಾಲಕಳೆಯುತ್ತಾರೆ. ಇಂಥವರಿಗೆ ಸೂರ್ಯನ ನೆನಪು ಒಮ್ಮೆಯಾದರೂ ಮನಸ್ಸಿನಲ್ಲಿ ಬಂದೀತೆ ? ಅವರು ಸೂರ್ಯನಿಗೆ ಪ್ರಾರ್ಥನೆಗಳನ್ನು ಸಲ್ಲಿಸುತ್ತಾರೆಯೆ ? ವಿಚಾರಮಾಡಬೇಕು.' ಆದ್ದರಿಂದ ಋಷಿಯು ಇಲ್ಲಿ ಸೂರ್ಯನ ಸನ್ನಿಧಿಯನ್ನು ನಾವು ಮರೆಯದಂತೆ ಇರಬೇಕೆನ್ನುವದಕ್ಕಾಗಿ ದರ್ಶನದಿಂದ ಆರಾಧನೆಯವರೆಗಿನ ಕರ್ತವ್ಯಗಳನ್ನು ನೆನಪುಮಾಡಿಕೊಟ್ಟಿರುತ್ತಾನೆ. ಬದುಕನ್ನು ಹಸನಾಗಿ ಮಾಡುವ ದೇವತೆಯ ಬಗ್ಗೆ ಎಚ್ಚರಿಸಿರುತ್ತಾನೆ.

ಇಷ್ಟೇ ಅಲ್ಲ. ನಾವು ಸೂರ್ಯನನ್ನು ಭಕ್ತಿಪೂರ್ವಕವಾಗಿ ಹೃದಯಕ್ಕೆ ತಂದುಕೊಂಡು ನಮ್ಮ ಕುಟುಂಬದವರೆಲ್ಲರನ್ನೂ ಆತನ ಆರಾಧನೆಮಾಡುವಂತೆ

ಎಚ್ಚರಿಸಿ ನಮ್ಮೊಡನೆ ಸೇರಿಸಿಕೊಂಡು, ಸಾತ್ವಿಕಭಾವದಿಂದ ನಮ್ರರಾಗಿ ಪ್ರತಿದಿನವೂ ಸೂರ್ಯನ ದರ್ಶನವನ್ನು ಮಾಡಿ ದೇವತಾಪರಾಧಗಳಿಂದ ಬಿಡುಗಡೆಯನ್ನು ಹೊಂದಿದವರಾಗಿ ಬಾಳಬೇಕೆಂದೂ ಋಷಿಯು ತಿಳಿಸಿರುತ್ತಾನೆ. ಹೀಗೆ ದಿನದಿನವೂ ಸೂರ್ಯನನ್ನು ಕಂಡು ಗೌರವವನ್ನು ಸಲ್ಲಿಸುವದು ಆರ್ಯರ ಪದ್ಧತಿಯಾಗಿದೆ.

ಈಗ ಮುಂದಿನ ಮಂತ್ರವನ್ನು ವಿಚಾರಮಾಡೋಣ :-

**ಓಂ ॥ ಮಹಿಜ್ಯೋತಿರ್ಬಿಭ್ರತಂ ತ್ವಾ ವಿಚಕ್ಷಣ ಭಾಸ್ವಂತಂ ಚಕ್ಷುಷೇ ಚಕ್ಷುಷೇ ಮಯಃ । ಆರೋಹಂತಂ ಬೃಹತಃ ಪಾಜಸಸ್ಪರಿ ವಯಂ ಜೀವಾಃ ಪ್ರತಿಪಶ್ಯೇಮ ಸೂರ್ಯ ॥**

"ಎಲೈ ವಿಚಕ್ಷಣನಾದ ಸೂರ್ಯನೆ, ಮಹತ್ತಾದ ಬೆಳಕನ್ನು ಹೊಂದಿ ವಿಭ್ರಾಜಮಾನನಾಗಿ, ನೋಡುವವರೆಲ್ಲರ ಕಣ್ಣಿಗೂ ಸುಖವುಂಟುಮಾಡುತ್ತಾ, ಹೆಚ್ಚಿನ ಬಲಸಂಪನ್ನನಾದ ಸಮುದ್ರರಾಜನ ಮೇಲೇರಿ ಸಾಗುತ್ತಿರುವ ನಿನ್ನನ್ನು ನಾವು ಪ್ರತಿದಿನವೂ ಕಾಣುವೆವು."

ಈ ಮಂತ್ರದಲ್ಲಿ ಸಮುದ್ರಕ್ಕೂ ಸೂರ್ಯನಿಗೂ ಹೋಲಿಸಿ ಸೂರ್ಯನ ಮಹತ್ತ್ವವನ್ನು ವರ್ಣಿಸಲಾಗಿದೆ. ಸಮುದ್ರರಾಜನು ಅಪಾರಗಂಭೀರನು. ವಿಶಾಲವಾದ ಸುತ್ತುವಳೆಯದಿಂದ ಕೂಡಿರುವನು. ಸಮುದ್ರವನ್ನು ದಾಟುವದೇನೂ ಸುಲಭವಲ್ಲ. ಅದರಲ್ಲಿಯೂ ಪ್ರತಿದಿನವೂ ಒಂದು ನಿಮಿಷವೂ ಕಾಲವ್ಯತ್ಯಾಸ-ವಿಳಂಬವಿಲ್ಲದೆ ಏಕಾಕಿಯಾಗಿ ನಿರಾಲಂಬನವಾದ ಆಕಾಶದಲ್ಲಿ ಸಂಚರಿಸುತ್ತಾ ಸಮುದ್ರವನ್ನು ಅತಿಕ್ರಮಿಸುವದೆಂಬುದು ಅತ್ಯದ್ಭುತವಾದ ಕಾರ್ಯವೇ ಸರಿ. ಸೂರ್ಯನಾದರೋ, ಈ ಕಾರ್ಯವನ್ನು ನಿರ್ವಹಿಸುತ್ತಿರುವನು. ನೀರಿನ ಮೇಲೆ ನಿಂತು ನೋಡಿದರೆ, ಅಥವಾ ಸಮುದ್ರದಡದಲ್ಲಿಯೇ ನಿಂತು ಸೂರ್ಯನ ಸಂಚಾರದ ವೈಖರಿಯನ್ನು ಗಮನಿಸಿದರೆ ಈ ಮಹಿಮೆಯು ತಿಳಿದೀತು. ಕೆಲವು ವೇಳೆ ಪಶ್ಚಿಮ ಸಮುದ್ರಗಳಲ್ಲಿ ಸೂರ್ಯನು ಮುಳುಗುವದನ್ನೂ ಪೂರ್ವಸಮುದ್ರದಲ್ಲಿ ಏಳುವದನ್ನೂ ನಾವು ನೋಡಿರಬಹುದು. ಆದರೇನು ? ಸಮುದ್ರಕ್ಕೂ ಸೂರ್ಯನಿಗೂ ಲಕ್ಷಾಂತರ ಮೈಲುಗಳ ಅಂತರವಿದ್ದು ನಮ್ಮ ಬರಿಗಣ್ಣಿಗೆ ಹಾಗೆ ಮುಳುಗಿದಂತೆ-ಎದ್ದಂತೆ ಸೂರ್ಯನು ಕಂಡುಬರುವನು. ಆದ್ದರಿಂದ ಸೂರ್ಯನ ಸಂಚಾರಪಥವನ್ನು ನಾವು ನೆನೆದಾಗ, ಹಾಗೂ ಸಮುದ್ರರಾಜನ ಗಾಂಭೀರ್ಯವಿಸ್ತಾರಗಳನ್ನು ಮನಸ್ಸಿಗೆ ತಂದುಕೊಂಡಾಗ ನಮ್ಮ ಮಾನವತ್ವವು ಎಷ್ಟು ಅಲ್ಪವೆಂದು ತಿಳಿದೀತು. ಸೂರ್ಯನ ಮಹತ್ವವೂ ಮನಸ್ಸಿಗೆ ಬಂದೀತು. ಹೀಗೆ ದರ್ಶನೀಯನಾಗಿ, ತೇಜಃಪುಂಜನಾಗಿ ನಮ್ಮನ್ನು ಎಲ್ಲಾ ವಿಧದಿಂದಲೂ ಪೋಷಿಸಿ ಸುಖಗೊಳಿಸುತ್ತಿರುವ ಸೂರ್ಯ ಭಗವಂತನನ್ನು ದರ್ಶನಮಾಡುತ್ತಾ ನೂರುವರ್ಷಗಳು ಬಾಳೋಣ-ಎಂದು ಇಲ್ಲಿ ಕೇಳಿಕೊಳ್ಳಲಾಗಿದೆ.

———

# ಬ್ರಹ್ಮಕಾರಣವಾದ

(ಸಂಪಾದಕರು)

ಶ್ರೀಗೌಡಪಾದಾಚಾರ್ಯರ "ಅಜಾತಿವಾದ" ಪ್ರಕ್ರಿಯೆಯಂತೆ ಏನೊಂದೂ ಹುಟ್ಟಿರುವದಿಲ್ಲವೆಂಬ ಸಿದ್ಧಾಂತವು ಅತ್ಯುನ್ನತಮಟ್ಟದ ವಿಚಾರಶೀಲರಾದ ಬ್ರಹ್ಮನಿಷ್ಠರಿಗೆ ಒಪ್ಪಾಗಿದ್ದು ಪರಮಸತ್ಯವಾಗಿದೆಯಾದರೂ, ವ್ಯವಹಾರದಲ್ಲಿಯೇ ಸದಾ ಕಾಲವೂ ಇದ್ದುಕೊಂಡಿದ್ದು ದ್ವೈತಬುದ್ಧಿಯನ್ನವಲಂಬಿಸಿ ತಮತಮಗೇ ಗೊತ್ತಿಲ್ಲದಂತೆಯೇ ಪ್ರಮಾತೃಬುದ್ಧಿಯಲ್ಲಿ ಸಿಲುಕಿದವರಾಗಿ, ಅನಂತರ ವಿಚಾರಕ್ಕೆ ಹೊರಡುವ ಪಂಡಿತ– ಪಾಮರ– ಆಸ್ತಿಕ– ನಾಸ್ತಿಕ– ದಾರ್ಶನಿಕ ಹಾಗೂ ಮತ– ಜಾತಿ– ವಯಸ್ಸು– ಅವಸ್ಥೆಗಳ– ಅಧ್ಯಾಸವುಳ್ಳ ಜನರೆಲ್ಲರಿಗೂ ಬ್ರಹ್ಮವೊಂದೇ ಪರಮಾರ್ಥ ಸತ್ಯವು, ಏಕಮೇವಾದ್ವಿತೀಯವು–ಎಂಬ ನಿಜವನ್ನು ಉಪಾಯದಿಂದ ಮನಗಾಣಿಸಿ ಕೊಡುವದಕ್ಕಾಗಿ ಶ್ರೀಆದಿಶಂಕರಾಚಾರ್ಯರು ತಮ್ಮ ಪ್ರಸ್ಥಾನತ್ರಯಭಾಷ್ಯಗಳಲ್ಲಿ ಸಾಂಪ್ರದಾಯಿಕವಾದ **ಅಜಾತಿವಾದವನ್ನೇ ಬ್ರಹ್ಮಕಾರಣ–ವಾದ**ವಾಗಿ ವ್ಯಾಖ್ಯಾನಮಾಡಿರುತ್ತಾರೆ. ಈ ರಹಸ್ಯವನ್ನು ಮನಗಾಣಬೇಕಾದರೆ ವಿಚಾರಕರು ನ್ಯಾಯವೈಶೇಷಿಕಾದಿದರ್ಶನಗಳ ಉದ್ಗ್ರಂಥಗಳನ್ನಾಗಲಿ, ಆಧುನಿಕವೇದಾಂತಿಗಳ ಹಾಗೂ ವ್ಯಾಖ್ಯಾನಕಾರರುಗಳ ವಾದಗ್ರಂಥಗಳನ್ನಾಗಲಿ, ಶಾಂಕರಭಾಷ್ಯಗಳನ್ನು ಓದಿ ತಾತ್ಪರ್ಯಗ್ರಹಣಮಾಡಿಕೊಳ್ಳುವ ಮುಂಚೆ ಓದಿರಬಾರದು. ಹಾಗೆಂದ ಮಾತ್ರಕ್ಕೆ ನ್ಯಾಯ– ವೈಶೇಷಿಕ– ಸಾಂಖ್ಯಪ್ರಕ್ರಿಯೆಗಳ ಮೂಲತತ್ತ್ವಗಳನ್ನೂ ತಿಳಿದಿರಬಾರದು–ಎಂದರ್ಥವಲ್ಲ. ಏಕೆಂದರೆ ದರ್ಶನಾಂತರಗಳ ಸಾಮಾನ್ಯಪರಿಚಯವಿಲ್ಲದವರಿಗೆ ಬ್ರಹ್ಮಕಾರಣವಾದವು ತಿಳಿಯುವದೇ ಇಲ್ಲ. ಹೀಗಿರುವದರಿಂದ ಶಂಕರ ಭಾಷ್ಯವನ್ನು ಅರ್ಥಮಾಡಿಕೊಳ್ಳುವದಕ್ಕೆ ತಕ್ಕಷ್ಟು ಸಂಸ್ಕೃತಸಾಹಿತ್ಯ–ವ್ಯಾಕರಣ ಜ್ಞಾನವೂ ದರ್ಶನಾಂತರಗಳ ಪರಿಚಯವೂ ಇರುವವರೇ ಇಂಥ ವಿಚಾರಸರಣಿಗೆ ಪ್ರವೇಶಿಸಬೇಕು. "ನಾಯಮಾತ್ಮಾ ಪ್ರವಚನೇನ ಲಭ್ಯಃ...." ಎಂಬ ಶ್ರುತಿಯಲ್ಲಿ ತಿಳಿಸಿರುವಂತೆ ಅತಿಯಾದ ಗ್ರಂಥಪಾಂಡಿತ್ಯವೂ ಅತಿಯಾದ ಅಜ್ಞತೆಯೂ– ಇವೆರಡೂ ಬ್ರಹ್ಮಜಿಜ್ಞಾಸೆಗೆ ಅಡ್ಡಿಗಳೇ ಆಗಿರುತ್ತವೆ.

ಈಗ ನೇರಾಗಿ ಬ್ರಹ್ಮಕಾರಣವಾದವನ್ನು ವಿಚಾರಮಾಡೋಣ. ಸಿದ್ಧಾಂತ ಪ್ರಧಾನವಾದ ಉಪನಿಷತ್ಪ್ರಸ್ಥಾನಗಳಲ್ಲಿ ಬ್ರಹ್ಮಕಾರಣವಾದವನ್ನು ತೀವ್ರವಾಗಿಯೇ ಪ್ರತಿಪಾದಿಸಿರುತ್ತದೆ. ಎಲ್ಲಾ ಉಪನಿಷತ್ತುಗಳಲ್ಲಿಯೂ ಜಗತ್ಕಾರಣವನ್ನು ಬ್ರಹ್ಮ, ಸತ್, ಪುರುಷ, ಅಕ್ಷರ–ಮುಂತಾದ ನಾಮಗಳಿಂದ ನಿರ್ದೇಶಿಸಿರುತ್ತದೆ. ಸೃಷ್ಟವಾದ ವಸ್ತುಗಳು, ಅವುಗಳ ಉತ್ಪತ್ತಿಕ್ರಮ– ಇವುಗಳ ವಿಷಯದಲ್ಲಿ ಒಂದು ಉಪನಿಷತ್ತಿಗೂ ಮತ್ತೊಂದಕ್ಕೂ ವಿನಾನ(ವ್ಯತ್ಯಾಸ) ವಿದ್ದರೂ ಕಾರಣವು ಅದೇ ಎಂಬಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದ್ದರಿಂದ ಉಪನಿಷತ್ತುಗಳೆಲ್ಲವೂ ಬ್ರಹ್ಮಕಾರಣ ವಾದವನ್ನೇ ತಾತ್ಪರ್ಯದಿಂದ ಎತ್ತಿಹಿಡಿದಿವೆ. ಬ್ರಹ್ಮಸೂತ್ರಕಾರರೂ ಇದನ್ನು

ಸಮರ್ಥಿಸಿರುತ್ತಾರೆ. ಆದ್ದರಿಂದ ಉಪನಿಷತ್ತುಗಳನ್ನು ಸ್ವತಂತ್ರವಾಗಿಯೇ-ಭಾಷ್ಯಗಳ ಅವಲಂಬನೆಯಿಲ್ಲದೆ-ಅಧ್ಯಯನಮಾಡಿರುವವರಿಗೂ ಬ್ರಹ್ಮಕಾರಣವಾದವು ಮನವರಿಕೆಯಾಗಿಯೇ ತೀರುತ್ತದೆ. ಕರ್ಮೋಪಾಸನೆಗಳ ಮಟ್ಟದಲ್ಲಿಯೇ ಕರ್ತೃತಂತ್ರವಾಗಿಯೇ ವೇದಾಂತಸಿದ್ಧಾಂತವನ್ನು ಸ್ಥಾಪಿಸಿ ಮೋಕ್ಷವನ್ನು ಪ್ರತಿಪಾದನೆಮಾಡುವ ಅದ್ವೈತಿಗಳಲ್ಲದ ವೇದಾಂತಿಗಳಿಗೂ ಮತಾಚಾರ್ಯರುಗಳಿಗೂ ಇಷ್ಟೇ ನಿರ್ಣಯವು ಸಾಕಾಗಿರುತ್ತದೆ. ಆದ್ದರಿಂದ ಈ ಸ್ಥಿತಿಯಲ್ಲಿಯೇ ಭಗವತ್ತತ್ತ್ವ, ಜೀವ- ಪ್ರಪಂಚಗಳ ತತ್ತ್ವ, ಬಂಧಮೋಕ್ಷಗಳ ಸ್ವಭಾವವನ್ನು ನಿರ್ಧರಿಸಿ ನೆಲೆಗೊಳ್ಳುವವರಿಗೆ ಅಜಾತಿವಾದವಾಗಲಿ, ಅದೇ ಬ್ರಹ್ಮಕಾರಣವಾದವೆನಿಸಿದೆಯೆಂಬುದಾಗಲಿ ಎಂದಿಗೂ ಹೊಳೆಯುವ ಸಂಭವವಿಲ್ಲ. ಒಂದು ವೇಳೆ ಅಂಥ ವಿಚಾರಗಳು ಅವರ ಕಿವಿಗೆ ಬಿದ್ದರೆ ಅದ್ವೈತಿಗಳನ್ನು ಪ್ರಚ್ಛನ್ನಬೌದ್ಧರೆಂದೂ ನಾಸ್ತಿಕರೆಂದೂ ಮಾಯಾವಾದಿಗಳೆಂದೂ ಅವರುಗಳು ದೂಷಿಸದೆ ಇರಲಾರರು. ಇಂಥ ಸಂದರ್ಭಗಳಲ್ಲಿ ನಿಜವಾದ ಅದ್ವೈತಿಗಳು ಯಾವ ಉತ್ತರವನ್ನಾಗಲಿ, ವಾದವಿವಾದಗಳನ್ನಾಗಲಿ ಹಮ್ಮಿಕೊಳ್ಳಲಾರರು.

ಈ ವಿಚಾರವು ಹೇಗಾದರೂ ಇರಲಿ, ಬ್ರಹ್ಮಕಾರಣವಾದಿಗಳೆಲ್ಲರೂ ಅಜಾತಿವಾದದ ಅವಲಂಬನೆಯಿಲ್ಲದೆ ಏಕಾಭಿಪ್ರಾಯವನ್ನು ಪ್ರಕಟಿಸುತ್ತಾರೆಯೊ? ಹೇಗೆ? ಎಂದು ಯಾರಾದರೂ ಕೇಳಿದರೆ 'ಇಲ್ಲ'ವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಬ್ರಹ್ಮವು ಜಗತ್ತಿಗೆ ಕಾರಣವೆಂದರೆ ಉಪಾದಾನವೋ? ನಿಮಿತ್ತವೋ? ಪರಿಣಾಮಿಯೊ, ಅಪರಿಣಾಮಿಯೊ? ಉಭಯಪಕ್ಷಗಳಲ್ಲಿಯೂ ಪರಸ್ಪರವಿರುದ್ಧಶ್ರುತಿಗಳನ್ನು ಹೊಂದಿಸುವದು ಹೇಗೆ? ನಿರ್ಗುಣಶ್ರುತಿಗಳನ್ನು ಕೈಬಿಡಬೇಕೆ? ಹೇಗೆ? ಹೀಗೆಲ್ಲ ಚರ್ಚೆಗಳು ಎದ್ದುಕೊಂಡು ಪ್ರಸ್ಥಾನಭೇದಗಳೂ, ಅಭಿಪ್ರಾಯಭೇದಗಳೂ ಈಗಲೂ ಹಾಗೆಯೇ ಉಳಿದುಕೊಂಡಿವೆ. ಒಂದು ವಾದವನ್ನು ಎತ್ತಿಹಿಡಿಯುವವರು ಮತ್ತೊಂದು ವಾದವನ್ನು ಖಂಡಿಸುತ್ತಾರೆ. ಇದು ಅನಿವಾರ್ಯವೂ ಹೌದು. ಆದರೆ ಮುಮುಕ್ಷುವಾದವನೇನುಮಾಡಬೇಕು? ಯಾವ ವಾದವನ್ನು ಸರಿ-ಎಂದು ಒಪ್ಪಿಕೊಳ್ಳಬೇಕು? ಎಲ್ಲವನ್ನೂ ವಿಮರ್ಶೆಮಾಡುವ ಸಾಮರ್ಥ್ಯವು ಆತನಿಗೆ ಎಲ್ಲಿರುತ್ತದೆ? ಅಷ್ಟರೊಳಗಾಗಿ ಆತನು ಯಾವದಾದರೊಂದು ವಾದವನ್ನೇ ಸರಿ ಎಂದು ಪಟ್ಟುಹಿಡಿದೇ ಬಿಟ್ಟಿದ್ದರೆ ಅವನಿಗೆ "ತತ್ತ್ವದರ್ಶನ"ವಾಗುವದು ಹೇಗೆ? ಕಡೆಗೆ ಅವನವನಿಗೆ ತೋಚಿದ್ದೇ ತತ್ತ್ವವೆಂದಾಗಿ ವೇದಾಂತಸಿದ್ಧಾಂತವು ನೆಲೆಯಿಲ್ಲದೆ ಹೋಗುತ್ತದೆಯಲ್ಲವೆ? ಈಗ ಇಂಥ ಪರಿಸ್ಥಿತಿಯು ಒದಗಿಯೇ ಬಿಟ್ಟಿದೆ. ಭಾರತದೇಶದಲ್ಲಿರುವ ಪೀಠಾಧಿಪತಿಗಳು ಕೂಡ ತಮ್ಮ ತಮ್ಮ ಹಿಂದಿನವರ ಸಂಪ್ರದಾಯವನ್ನೇ ಅನುಸರಿಸುವದಾಗಿ ಹೇಳುತ್ತಾ ದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಶಿವಾದ್ವೈತ, ಭಾಗವತಮತ- ಇತ್ಯಾದಿ ರೀತಿಯಲ್ಲಿ ಒಡೆದುಕೊಂಡು ಬಿಟ್ಟಿರುವದರಿಂದ ಬ್ರಹ್ಮಕಾರಣವಾದಕ್ಕೆ ನಿಜವಾದ ಅರ್ಥವನ್ನು ಹೇಳಿ ಸಮನ್ವಯಮಾಡುವವರೇ ಇಲ್ಲವಾಗಿದೆ.

ಈಗ ಸಾಂಪ್ರದಾಯಿಕಪ್ರಕ್ರಿಯಾನುಗುಣವಾಗಿ ಶ್ರೀ ಗೌಡಪಾದರು ಹಾಗೂ ಆದಿಶಂಕರರ ಮಾರ್ಗದರ್ಶನದಂತೆ ಬ್ರಹ್ಮಕಾರಣವಾದವನ್ನು ವಿಚಾರಮಾಡೋಣ. ಶ್ರೀ ಶಂಕರರು ಹೇಳುವದೇನೆಂದರೆ : "ಶ್ರುತ್ಯರ್ಥಗಳನ್ನು ನ್ಯಾಯೋಪಬೃಂಹಿತವಾಗಿ ಕಂಡುಕೊಂಡು ಸಕಲಶ್ರುತಿಗಳಿಗೂ ಏಕತಾತ್ಪರ್ಯವನ್ನು ಮಾಡಬೇಕು. ಹಾಗೆ ಹೊಂದುವಂತೆ ಬಾದರಾಯಣರು ವೇದಾಂತವಾಕ್ಯಕುಸುಮಗಳನ್ನು ಹೆಣೆದಿದ್ದಾರೆ. ಅವರು ತಿಳಿಸಿರುವ ಸಮನ್ವಯಕ್ರಮವೂ ವಿರೋಧಪರಿಹಾರಗಳೂ ಸಾಧನ-ಫಲಗಳ ನಿರ್ಣಯವೂ ಅಸಾಧಾರಣವಾಗಿವೆಯಾದ್ದರಿಂದ ಯಾರೊಬ್ಬರೂ ಶ್ರುತಿಗಳನ್ನು ವೇದಾಂತಮೀಮಾಂಸಾಶಾಸ್ತ್ರನ್ಯಾಯವನ್ನು ಮೀರಿ ಸ್ವೇಚ್ಛೆಯಾಗಿ ಅರ್ಥಮಾಡಬಾರದು. ಅಥವಾ ತಮ್ಮ ಇಷ್ಟಸಾಧನೆಗಾಗಿ ಶ್ರುತಿಗಳನ್ನೂ ಸೂತ್ರಗಳನ್ನೂ ತಿರಿಚಿ ಅರ್ಥಮಾಡುವದಾಗಲಿ, ಅಪಾರ್ಥಮಾಡುವದಾಗಲಿ ಸಲ್ಲದು. ಏಕೆಂದರೆ ಶ್ರುತಿಗಳು ಅನುಭವಸಮ್ಮತವಾದ ಸಾರ್ವಕಾಲಿಕಪರಮಸತ್ಯವನ್ನೇ ತಿಳಿಸುವದರಿಂದ ಅನುಭವವಿರುದ್ಧವಾಗಿ ವೇದಾಂತಶ್ರುತಿಗಳಿಗೆ ಅರ್ಥಮಾಡಿದರೆ ದ್ರೋಹವಾಗುತ್ತದೆ. ಆದ್ದರಿಂದ ಕೆಲವು ವೇಳೆ ಸಮನ್ವಯವು ಬೇರೊಂದು ರೀತಿಯಿಂದಲೂ ಹೊಂದುವಂತೆ ಕಂಡುಬಂದಲ್ಲಿ ಅಂಥ ನಿರ್ಣಯಗಳನ್ನು ಪರಮಾನುಭವದ ಒರೆಗಲ್ಲಿಗೆ ತಿಕ್ಕಿ ನೋಡಬೇಕು. ಬದುಕಿರುವಾಗಲೇ ಉಂಟಾಗುವ ಇಂಥ ಅನುಭವವು ಸಾರ್ವತ್ರಿಕವಾಗಿದ್ದು ಎಲ್ಲರಿಗೂ ಒಂದೇ ರೀತಿಯಾಗಿದ್ದುಕೊಂಡಿರುವದರಿಂದ ಇದಕ್ಕನುಗುಣವಾದ ಸಮನ್ವಯವೂ ಸಾರ್ವತ್ರಿಕವಾಗಲೇಬೇಕು. ಆಗಲೇ ವೇದಾಂತವು ನಿರ್ದುಷ್ಟವೆನಿಸಿ ಅದು ಪ್ರತಿಪಾದಿಸುತ್ತಿರುವ ಮುಕ್ತಿಯು ಈಗಲೇ ಇಲ್ಲಿಯೇ ಕಂಡುಕೊಳ್ಳಲ್ಪಟ್ಟದ್ದಾಗುತ್ತದೆ. ಮತ್ತು 'ಅತ್ರ ಬ್ರಹ್ಮ ಸಮಶ್ನುತೇ' ಎಂಬ ಶ್ರುತಿಗೆ ವಾಚ್ಯಾರ್ಥವನ್ನೇ ಗ್ರಹಿಸಿದಂತಾಗುತ್ತದೆ. ಹೇಗೆಂದರೆ : ಅತ್ರ–ಇಲ್ಲಿ, ಸಮಶ್ನುತೇ (ವರ್ತಮಾನಕಾಲದ ಕ್ರಿಯಾಪದ) ಆನಂದವನ್ನು ಪಡೆದುಕೊಳ್ಳುತ್ತಾನೆ– ಎಂದು ಇದ್ದದ್ದು ಇದ್ದಂತೆ ಅರ್ಥಮಾಡಿದ್ದಾಗುವದು." ಹೀಗೆ ಶ್ರೀ ಶಂಕರರು ಶ್ರುತ್ಯರ್ಥಪ್ರತಿಪಾದಕರೂ ಸಮನ್ವಯಕಾರರೂ ಆಗಿರುವದರಿಂದ ಬ್ರಹ್ಮಕಾರಣವಾದವನ್ನು ಅವರು ತೀವ್ರವಾಗಿ ಪರಿಶೀಲಿಸಿ, ಚಿಂತಿಸಿ, ಮತ್ತೆಮತ್ತೆ ಮನನಮಾಡಿದ ಅನಂತರ ಹೀಗೆನ್ನುತ್ತಾರೆ : "ಕೇಳಿರಿ ; ಬ್ರಹ್ಮವು ಜಗತ್ಕಾರಣವೆಂಬ ವಾಕ್ಯದಲ್ಲಿ ಅದು ಜಗತ್ಕಾರಣವೇ–ಎಂಬುದು ಪ್ರತಿಪಾದ್ಯವಲ್ಲ. ಮತ್ತೇನೆಂದರೆ ಜಗತ್ತಿಗೆ ಒಂದು ಕಾರಣವಿರಬೇಕಲ್ಲವೆ ? ಎಂದು ಕೇಳುವವರಿಗಾಗಿ ಬ್ರಹ್ಮವೇ ಜಗತ್ಕಾರಣವು ಎಂದು ಶ್ರುತಿಗಳು ತಿಳಿಸುತ್ತಿವೆ. ಆದ್ದರಿಂದ ಯಾರೊಬ್ಬರೂ 'ಕಾರಣವಾದ' ವನ್ನು ನಿಜವೆಂದು ಹಿಡಿಯಬಾರದು ; ಆದರೆ ಲೋಕಸಿದ್ಧವಾದ (ಅವಿಚಾರಿತದಶೆಯಲ್ಲಿನ) ಕಾರ್ಯಕಾರಣವಾದವನ್ನು ನೆಪಮಾಡಿಕೊಂಡು ಬ್ರಹ್ಮವೇ ಜಗತ್ಕಾರಣವೆಂಬ ಸೋಪಾನಾರೋಹಣವನ್ನು ಮಾಡಿರಿ ; ಅನಂತರ ಆ ಮೆಟ್ಟಿಲಲ್ಲೇ ನಿಲ್ಲದೆ, ಕಾರಣತ್ವವು ಬ್ರಹ್ಮಾನುಭವದಲ್ಲಿ ನಿಂತಾಗ ಕಂಡುಬರುವದಿಲ್ಲವಾದ್ದರಿಂದ ಹಾಗೂ ಅದು ಔಪಾಧಿಕವೆಂದೂ ಗೊತ್ತಾಗುವದರಿಂದ ಅದನ್ನು ಕೈಬಿಟ್ಟು ಕಾರ್ಯಕಾರಣ–

ಲಕ್ಷ್ಯಲಕ್ಷಣ-ಸವಿಶೇಷ ನಿರ್ವಿಶೇಷ-ಇತ್ಯಾದಿ ಮಾನಸಿಕ ಭ್ರಮೆಗಳಿಂದ ಮೇಲೆದ್ದು ಅಜಾದ್ವಿತೀಯವಾದ ಪರಬ್ರಹ್ಮವೊಂದೇ ಪರಮಸತ್ಯವೆಂಬ ಸ್ವಾನುಭವಾತ್ಮಕವಾದ ಮುಕ್ತಿಯನ್ನು ಪಡೆದು ಧನ್ಯರಾಗಿರಿ ; ಆ ಸ್ಥಿತಿಯಲ್ಲಿ ನಿರೋಧ-ಉತ್ಪತ್ತ್ಯಾದಿಗಳಾವುವೂ ಇಲ್ಲ : ಸೃಷ್ಟಿಸ್ಥಿತಿಪ್ರಲಯಗಳಿಲ್ಲ, ಅವಸ್ಥಾತ್ರಯಗಳೂ ಇಲ್ಲ, ಅದು ತಾನೊಂದೇ ಆಗಿದೆ. ಅದೇ ತಾನೇ ತನ್ನಲ್ಲಿಯೇ ತನ್ನನ್ನೇ ಉಂಟುಮಾಡಿಕೊಂಡಂತೆ-ಹೊರತೋರಿದಂತೆ-ಲಯವಾದಂತೆ ಭಾಸವಾಗುತ್ತದೆ. **"ಇತ್ಯೇಷಾ ಪರಮಾರ್ಥತಾ"** ಎಂದು ಸಾರಿರುತ್ತಾರೆ. ಇಂಥ ಪರಮಬೋಧೆಯನ್ನು ನೀಡಿರುವ ಆದಿಶಂಕರರು ಸಾಕ್ಷಾತ್ ಪರಮೇಶ್ವರನೇ-ಎಂಬಲ್ಲಿ ಸಂಶಯವೇನಿದ್ದೀತು?

ಹೀಗಿರುವದರಿಂದ ಉಪನಿಷತ್ತುಗಳಿಗಾಗಲಿ, ವೇದಾಂತಸೂತ್ರಗಳಿಗಾಗಲಿ-ಶ್ರೀ ಶಂಕರಾಚಾರ್ಯರು ತಮ್ಮ ಭಾಷ್ಯಗಳನ್ನು ರಚಿಸದೆ ಹೋಗಿದ್ದರೆ ವೇದಾಂತ ದರ್ಶನದ ಅಂತರಂಗವನ್ನು ನಾವು ಅರಿಯುವದು ಈಗಲೂ ಸಾಧ್ಯವಾಗುತ್ತಿರಲಿಲ್ಲ. ಶ್ರೀಶಂಕರರು ಪರಮಹಂಸರೂ ಜ್ಞಾನನಿಷ್ಠರೂ ಆಗಿದ್ದರೂ ತಮ್ಮ ಭಾಷ್ಯಗ್ರಂಥಗಳನ್ನು ಮಾತ್ರ ಸಾಮಾನ್ಯಜಿಜ್ಞಾಸುಗಳ ಮಟ್ಟಕ್ಕೆ ಎಟಕುವಂತೆಯೇ ರಚಿಸಿದ್ದಾರೆ. ಹೇಗೆಂದರೆ ಶ್ರುತಿಯಲ್ಲಿ ಬ್ರಹ್ಮವು ಜಗತ್ಕಾರಣವೆಂದು ಉಪಾಯಮಾತ್ರವಾಗಿ ತಿಳಿಸಿರುವದನ್ನು ಬಾದರಾಯಣರು 'ಜನ್ಮಾದ್ಯಸ್ಯ ಯತಃ' ಎಂದು ಸೂತ್ರಿಸಿ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮದ ಲಕ್ಷಣವು-ಎಂಬ ಅಭಿಪ್ರಾಯವು ಬರುವಂತೆ ತಿಳಿಸಿದ್ದಾರೆ. ಬ್ರಹ್ಮಸೂತ್ರಗಳಲ್ಲಿ ಅಜಾತಿವಾದವು ಪ್ರತ್ಯಕ್ಷವಾಗಿ ಪರಾಮರ್ಶೆ ಮಾಡಲ್ಪಟ್ಟಿಲ್ಲವೆಂಬುದು ನಿಜ. "ತದನನ್ಯತ್ವಮ್...."ಮುಂತಾದ ಸೂತ್ರಗಳಲ್ಲಿ ಲಕ್ಷಣೆಯಿಂದ ಪರಾಮರ್ಶಿಸಲ್ಪಟ್ಟಿರುವದೂ ಅಷ್ಟೇ ನಿಜ. ಸೂಕ್ಷ್ಮಮತಿಗಳು ಇದನ್ನು ವಿಚಾರದಿಂದ ಮನಗಾಣಬಹುದಾಗಿದೆ. ಶ್ರೀಶಂಕರರು ಬ್ರಹ್ಮಲಕ್ಷಣ ಸೂತ್ರವನ್ನು ಯಥಾಶ್ರುತವಾಗಿ ಸರ್ವರಿಗೂ ತಿಳಿಯುವಂತೆ ಸೂತ್ರಾನುಸಾರವಾಗಿ ವ್ಯಾಖ್ಯಾನಮಾಡಿ ಅನಂತರ 'ಈ ಸೂತ್ರವು ಈಶ್ವರನಿದಾನ-ಎಂಬುದಕ್ಕೆ ಹೇತುವನ್ನು ಸೂಚಿಸುವ ಅನುಮಾನಪ್ರಮಾಣವನ್ನು ಹೇಳುವದಕ್ಕಾಗಿ ಬಂದಿಲ್ಲ'-ಎಂದು ತಿಳಿಸಿಕೊಟ್ಟು ಜಗತ್ಕಾರಣವನ್ನು ಹೇಳುವ ಶ್ರುತಿಗಳೆಲ್ಲವೂ ಅಜಾದ್ವಿತೀಯ ಬ್ರಹ್ಮದಲ್ಲಿಯೇ ಸಮನ್ವಯವನ್ನು ಹೊಂದಿರುತ್ತವೆ- ಎಂದು ವ್ಯಾಖ್ಯಾನಮಾಡಿದ್ದಾರೆ. ಅನಂತರ ಬ್ರಹ್ಮಜಿಜ್ಞಾಸೆಗಾಗಿ ಬ್ರಹ್ಮವನ್ನು ಪ್ರಸ್ತಾಪಿಸಿದೆಯಾದ್ದರಿಂದ ತಿಳಿಯಲ್ಪಡಬೇಕಾಗಿರುವ ಬ್ರಹ್ಮವೇ ಶಾಸ್ತ್ರಾರ್ಥವೆಂದೂ ಸಿದ್ಧವಸ್ತುವೇ ಆಗಿರುವದರಿಂದ ಶಾಸ್ತ್ರವು ಬ್ರಹ್ಮವಲ್ಲದ್ದನ್ನು ಅಲ್ಲಗಳೆಯುವ ಮೂಲಕ ಪ್ರಮಾಣವೆಂದೂ ಪ್ರತಿಪಾದಿಸಿದ್ದಾರೆ. ಇದರಿಂದ ಸಿದ್ಧವಾಗುವದೇನೆಂದರೆ : ಬ್ರಹ್ಮವನ್ನು ತಿಳಿಸುವದಕ್ಕೆ ಕಾರ್ಯಕಾರಣಪ್ರಕ್ರಿಯೆಯು ಉಪಾಯವಾಗಿದ್ದು ಶ್ರುತಿಯಿಂದಲೇ ಅದು ಅಧ್ಯಾರೋಪಿತವಾಗಿದೆಯೆಂದೂ ನಿತ್ಯಶುದ್ಧಬುದ್ಧಮುಕ್ತಬ್ರಹ್ಮವು ಅಜವೂ ಅದ್ವಿತೀಯವೂ ಆಗಿದೆಯೆಂದೂ ಗೊತ್ತಾಗುತ್ತದೆ. ಇದೇ ಬ್ರಹ್ಮಕಾರಣವಾದವು.

— —

# ಸರ್ವಸಂಕ್ರಾಂತಿವ್ರತ

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ ಕೆ. ಜಿ. ಸುಬ್ರಾಯಶರ್ಮರು, ಬೆಂಗಳೂರು)

ಈವರೆಗೆ ಹನ್ನೊಂದು ಬೇರೆಬೇರೆಯ ಸಂಕ್ರಾಂತಿವ್ರತಗಳನ್ನು ತಿಳಿಸಿದ್ದಾಗಿದೆ. ಈಗ ಕಡೆಯದಾದ ಸರ್ವಸಂಕ್ರಾಂತಿಯನ್ನು ವಿವರಿಸಲಾಗುವದು. ಇದು ಉಳಿದೆಲ್ಲ ಸಂಕ್ರಾಂತಿವ್ರತಗಳ ಫಲವನ್ನೂ ಉಂಟುಮಾಡಲಿದೆ. ಈ ವ್ರತವನ್ನು ಯಾವ ಸಂಕ್ರಾಂತಿ ಪುಣ್ಯಕಾಲದಲ್ಲಿಯಾದರೂ ಮಾಡಬಹುದು. ಹಾಗೂ ಇದನ್ನು ಬಗೆ ಬಗೆಯ ವಿಧಾನಗಳಿಂದಲೂ ಆಚರಿಸಬಹುದಾಗಿದೆ. ಅವುಗಳಲ್ಲಿ ಕೆಲವನ್ನು ಈಗ ಪ್ರಸ್ತಾಪಿಸಲಾಗುವದು.

೧. **ಪದ್ಮಸಂಕ್ರಾಂತಿ :** ಚಂದನಗಂಧದಿಂದ ಎಂಟುದಳಗಳ ಪದ್ಮವನ್ನು ರಚಿಸಿ ಆ ದಳಗಳಲ್ಲಿ ಕ್ರಮವಾಗಿ ರವಿ, ಸೋಮ, ಋಙ್ಮಂಡಲಾಭಿಮಾನಿ ದೇವತೆಗಳು, ಸವಿತೃ, ತಪನ, ಮಿತ್ರ, ಮಾರ್ತಾಂಡ, ವಿಷ್ಣು- ಇವರುಗಳನ್ನು ಆವಾಹಿಸಬೇಕು. ನಡುವೆ ಕರ್ಣಿಕೆಯಲ್ಲಿ ಆದಿತ್ಯನನ್ನು ಆವಾಹಿಸಬೇಕು. ಚಿನ್ನದ ಕಮಲವನ್ನು ಸಹ ಮಾಡಿಸಿ ಜೊತೆಗೆ ಇಟ್ಟು ಸೂರ್ಯಪೂಜೆಯನ್ನು ವಿಧಿಪ್ರಕಾರ ವಾಗಿ ಮಾಡಬೇಕು. ಅರ್ಘ್ಯಪ್ರದಾನ-ನಮಸ್ಕಾರಗಳನ್ನು ಮಾಡಿದ ಅನಂತರ ಪ್ರಾರ್ಥನೆಮಾಡಬೇಕು. ಹೀಗೆ ಹನ್ನೆರಡುಬಾರಿ ವ್ರತಮಾಡಿದ ಅನಂತರ ಉದ್ಯಾಪನೆಯನ್ನು ಮಾಡಿ ಹನ್ನೆರಡು ಗೋವುಗಳು, ಹನ್ನೆರಡು ಕಲಶಗಳು, ಹಾಗೂ ವಸ್ತ್ರಗಳನ್ನು ದಾನಮಾಡಬೇಕು. ಶಕ್ತಿಯಿಲ್ಲದವರು ಒಂದಾದರೂ ದಾನಮಾಡಬೇಕು. ಇದು ಒಂದು ಕ್ರಮವಾಗಿರುತ್ತದೆ.

೨. **ಊರ್ಣಸಂಕ್ರಾಂತಿ :** ಇದನ್ನು ವಿಶೇಷವಾಗಿ ಧನುರ್ಮಾಸದಲ್ಲಿ ಮಾಡಬೇಕು. ಆಗ ಚಳಿಯು ಹೆಚ್ಚಾಗಿರುವದರಿಂದ ಹನ್ನೆರಡು ಜನರಿಗೆ ಹನ್ನೆರಡು ಕಂಬಳಿಗಳನ್ನು ದಾನಕೊಡಬೇಕು. ಹಾಗೆ ಕೊಡುವ ಮುಂಚೆ ಸಾಧಕನು ಸೂರ್ಯೋದಯಕ್ಕೆ ಮುಂಚೆಯೇ ಸ್ನಾನಮಾಡಿ ಒಂದು ಮುಹೂರ್ತದೊಳಗಾಗಿ ಸೂರ್ಯಪೂಜೆಯನ್ನು ಮಾಡಿ ಎಳ್ಳನ್ನ, ತುಪ್ಪ, ಪಾಯಸಗಳಿಂದ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಅನಂತರ ದಕ್ಷಿಣೆಸಹಿತವಾಗಿ ಉಣ್ಣೆಯ ಕಂಬಳಿಗಳನ್ನು ಸೂರ್ಯಪ್ರೀತ್ಯರ್ಥವಾಗಿ ದಾನಮಾಡಬೇಕು. ಸಾಧ್ಯವಾದರೆ ಧನುರ್ಮಾಸದ ಮೂವತ್ತು ದಿನಗಳಲ್ಲಿಯೂ ಈ ವ್ರತ-ದಾನಾದಿಗಳನ್ನು ಮಾಡಬಹುದು. ಆಗದೆ ಇದ್ದರೆ ನಾಲ್ಕು ಭಾನುವಾರಗಳಲ್ಲಿಯಾದರೂ ಮಾಡಬಹುದು.

೩. **ಘೃತಸ್ನಪನಸಂಕ್ರಾಂತಿ :** ಇದನ್ನು ಉತ್ತರಾಯಣಸಂಕ್ರಾಂತಿಗಳಲ್ಲಿ ಮಾಡಬೇಕು. ಇದರ ಕ್ರಮವೇನೆಂದರೆ: ಒಂದು ಬಳ್ಳ ಪ್ರಮಾಣದಷ್ಟು ಹಸುವಿನ ತುಪ್ಪವನ್ನು ಪೂಜಾಸಾಮಗ್ರಿಗಳೊಡನೆ ವಿಷ್ಣುದೇವಾಲಯಕ್ಕೆ ಒಯ್ದು ಅಲ್ಲಿ ದೇವರಿಗೆ ತುಪ್ಪದಿಂದ ಅಭಿಷೇಕವನ್ನು ಮಾಡಿಸಿ ಗೋವುಸಹಿತವಾಗಿ ತುಪ್ಪವನ್ನು ಕುಟುಂಬವು ದೊಡ್ಡದಾಗಿರುವ ಬ್ರಾಹ್ಮಣನಿಗೆ ದಾನಮಾಡಬೇಕು. ಇದರಿಂದ ಪಾಪ

ಪರಿಹಾರವಾಗಿ ಆಯುಷ್ಯಾಭಿವೃದ್ಧಿಯುಂಟಾಗುವದು. ಆದಿತ್ಯರೂಪಿಯಾದ ಶ್ರೀ ಹರಿಯು ಸಂತುಷ್ಟನಾಗುವನು.

೪. **ಘೃತಕಂಬಳಸಂಕ್ರಾಂತಿ:** ಇದನ್ನು ಮಾಘಮಾಸದಲ್ಲಿ ಅನುಷ್ಠಾನ ಮಾಡಬೇಕು. ಇಲ್ಲಿ ಕಂಬಳ ಎಂದರೆ ಕಂಬಳಪ್ರಮಾಣ ಎಂದರ್ಥ. ವ್ರತಪರಿಭಾಷೆಯ ಪ್ರಕಾರ, ಆಗೆದು ಅಥವಾ ಬಗೆದುತೆಗೆಯುವಂಥ ಗಟ್ಟಿಯಾದ ತುಪ್ಪವನ್ನು ಮೂರುನೂರಐವತ್ತುಸೇರು ತೂಕದಷ್ಟು ( ಒಂದು ಸೇರಿಗೆ ೨೪ ತೊಲಗಳಂತೆ ) ಕೂಡಿಹಾಕಿಕೊಂಡಲ್ಲಿ ಒಂದು ಮಹಾಕಂಬಳವೆನಿಸುವದು. ಅಷ್ಟು ಪ್ರಮಾಣವು ಸಾಧ್ಯವಾಗದಿದ್ದರೆ ಅದರ ಕಾಲುಭಾಗದಷ್ಟು ತುಪ್ಪವನ್ನಾದರೂ ಕೂಡಿಸಿಕೊಂಡು ಪೂಜಾಸಾಮಗ್ರಿಗಳೊಡನೆ ಶಿವದೇವಾಲಯಕ್ಕೆ ಹೋಗಿ ಅಲ್ಲಿ ಮಹಾಲಿಂಗದ ಶಿರಸ್ಸಿನಮೇಲೆ ತುಪ್ಪವನ್ನೆಲ್ಲ ಅಭಿಷೇಕಮಾಡಬೇಕು. ಅನಂತರ ತಿಲಾಕ್ಷತೆ, ಸಾಸಿವೆ ಅಕ್ಷತೆ, ಎಳೆಯ ಬಿಲ್ವಪತ್ರೆಗಳು, ಚಿನ್ನದ ಪದ್ಮಗಳಿಂದ ಮಹಾದೇವನನ್ನು ಪೂಜಿಸಬೇಕು. ಧೂಪದೀಪನೈವೇದ್ಯತಾಂಬೂಲನೀರಾಜನಾದ್ಯುಪಚಾರಗಳಿಂದ ಭಗವಂತನನ್ನು ಆರಾಧಿಸಿ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಶಿವಪಂಚಾಕ್ಷರೀ ಮಹಾಮಂತ್ರವನ್ನು ಜಪಿಸಬೇಕು. ರಾತ್ರಿಯಲ್ಲಿ ಜಾಗರಣೆಮಾಡಬೇಕು. ಪುನಃ ಬೆಳಗ್ಗೆಯೂ ಸ್ನಾನಮಾಡಿ ಮತ್ತೊಮ್ಮೆ ಘೃತಸ್ನಾನವನ್ನು ಮಾಡಿಸಿ ಪೂಜಾದಿಗಳನ್ನು ಪೂರೈಸಿ ಬ್ರಾಹ್ಮಣರಿಗೆ ಅನ್ನದಾನಮಾಡಬೇಕು. ಈ ವ್ರತವನ್ನು ಸುನಾಗ-ಎಂಬ ಮಹರ್ಷಿಯು ಶೂಲಕರ್ಣನೆಂಬ ಭಕ್ತನಿಗೆ ಉಪದೇಶಿಸಿರುತ್ತಾನೆ. ಇದರಿಂದ ದಾರಿದ್ರ್ಯನಾಶವೂ ಐಶ್ವರ್ಯಭೋಗಾದಿಗಳ ಪ್ರಾಪ್ತಿಯೂ ಆಗುತ್ತವೆ- ಎಂದು ವ್ರತಮಾಹಾತ್ಮ್ಯೆಯಲ್ಲಿ ತಿಳಿಸಿದೆ.

೫. **ದಧಿಮಂಥನಸಂಕ್ರಾಂತಿ:** ಇದನ್ನು ಕೂಡ ಮಕರಸಂಕ್ರಾಂತಿಯ ದಿನ ಆಚರಿಸಬೇಕು. ಇದು ಪುತ್ರಪ್ರದವಾದ ವ್ರತವಾಗಿರುತ್ತದೆ. ಮೊಸರನ್ನು ಕಡೆಯುವಂಥ ದೊಡ್ಡ ಪಾತ್ರೆಯಲ್ಲಿ ಮೊಸರನ್ನು ತುಂಬಿ ಅದಕ್ಕೆ ತಕ್ಕದ್ದಾದ ಕಡಗೋಲನ್ನು ಜೋಡಿಸಿ ಯಶೋದಾದೇವಿಯನ್ನೂ ಶ್ರೀಕೃಷ್ಣನನ್ನೂ ಅದರಲ್ಲಿ ಆವಾಹಿಸಿ ಪೂಜಿಸಬೇಕು. 'ಶ್ರೀಕೃಷ್ಣಪರಮಾನಂದ ಸಂಸಾರಾರ್ಣವತಾರಕ । ಪುತ್ರಂ ದೇಹಿ ಮನೋಜ್ಞಂ ಚ ಋಣತ್ರಯವಿಮೋಕ್ಷಕಮ್ ॥ ಎಂಬ ಮಂತ್ರದಿಂದ ಪ್ರಾರ್ಥಿಸಬೇಕು. ಅನಂತರ ಒಬ್ಬ ಬ್ರಾಹ್ಮಣನಿಗೆ ಅದನ್ನೆಲ್ಲ ದಾನಕೊಡಬೇಕು. ಹಾಗೆ ಕೊಡುವಾಗ 'ಎಲೈ ದ್ವಿಜಶ್ರೇಷ್ಠನೆ, ಮೊಸರುಸಮೇತವಾದ ಪಾತ್ರೆ, ಕಡಗೋಲು, ಬೆಣ್ಣೆ, ದೇವಕೀಸಮೇತನಾದ ಶ್ರೀಕೃಷ್ಣ- ಎಲ್ಲವನ್ನೂ ಸ್ವೀಕರಿಸುವವನಾಗು, ಸೂರ್ಯನ ರೂಪನಾದ ನೀನು ನನಗೆ ಅನುಗ್ರಹಮಾಡು'- ಎಂದು ಬೇಡಿಕೊಳ್ಳಬೇಕು. ಈ ರೀತಿಯಾಗಿ ವ್ರತಾನುಷ್ಠಾನವನ್ನು ಮಾಡಿದರೆ ಪುತ್ರಸಂತಾನವಾಗುವದು-ಎಂದು ತಿಳಿಸಿದೆ. ಇವೆಲ್ಲವೂ ಕಾಮ್ಯವ್ರತಗಳಾದ್ದರಿಂದ ದ್ರವ್ಯಗಳು-ವಿಧಿವಿಧಾನಗಳಿಗಿಂತಲೂ ಭಕ್ತಿ-ಶ್ರದ್ಧೆಗಳೇ ಮುಖ್ಯಬಂಡವಾಳವಾಗಿರಬೇಕೆಂಬುದು ತಿಳಿದೇ ಇದೆಯಷ್ಟೆ?

---

# ಶ್ರೀಶ್ರೀ ವೀರೇಶ್ವರಾನಂದಸ್ವಾಮಿಜಿಯವರು

(ಚ. ಲ. ಪರಮೇಶ್ವರಗುಪ್ತರು, ದಾವಣಗೆರೆ)

ಭಾರತ ಹಾಗೂ ವಿದೇಶಗಳಲ್ಲೆಲ್ಲ ಹರಡಿರುವ ಪ್ರಖ್ಯಾತ ರಾಮಕೃಷ್ಣಮಠ ಮತ್ತು ಶ್ರೀ ರಾಮಕೃಷ್ಣ ಮಿಷನ್‌ನ ಮಹಾಧ್ಯಕ್ಷರಾಗಿದ್ದ ಶ್ರೀವೀರೇಶ್ವರಾನಂದ ಸ್ವಾಮಿಜಿಯವರು ತಾ 13-3-1985 ನೇ ಬುಧವಾರ ಕಲ್ಕತ್ತ ಬೇಲೂರುಮಠದ ಕೇಂದ್ರಪೀಠದಲ್ಲಿ ಮಹಾಸಮಾಧಿಸ್ಥರಾದರು. ೯೩ ವರ್ಷಗಳ ಹಿಂದೆ ಮಂಗಳೂರಿನ ಶ್ರೀಮಂತ ಹಾಗೂ ಸುಸಂಸ್ಕೃತ ಸಾರಸ್ವತಕುಟುಂಬದಲ್ಲಿ ಜನಿಸಿದ್ದ ಇವರು ಪ್ರಾಥಮಿಕಶಿಕ್ಷಣವನ್ನು ಮಂಗಳೂರಿನಲ್ಲಿ ಪೂರೈಸಿಕೊಂಡು ಮುಂದೆ ಮದ್ರಾಸ್ ಟ್ರಿಪ್ಲಿಕೇನ್ ಹಿಂದೂ ಹೈಸ್ಕೂಲಿನಲ್ಲಿಯೂ ಅನಂತರ ಪ್ರೆಸಿಡೆನ್ಸಿಕಾಲೇಜಿನಲ್ಲಿಯೂ ವ್ಯಾಸಂಗಮಾಡಿ ಉತ್ತಮದರ್ಜೆಯಲ್ಲಿ ಪದವೀಧರರಾದರು. ಕ್ರೀಡಾಕ್ಷೇತ್ರದಲ್ಲಿಯೂ ಇವರು ಹೆಸರುಗಳಿಸಿ ಹಾಕಿ ಆಟದಲ್ಲಿ ನೈಪುಣ್ಯವನ್ನು ಪಡೆದಿದ್ದರು. ಚಿಕ್ಕಂದಿನಿಂದಲೇ ಶ್ರೀಸ್ವಾಮಿ ವಿವೇಕಾನಂದರ ಭಾಷಣಗಳು ಹಾಗೂ ಅವರು ಬಾರಿಸಿದ ವೇದಾಂತಡಿಂಡಿಮಕ್ಕೆ ಮಾರುಹೋಗಿದ್ದರು. ೧೯೧೬ ರಲ್ಲಿ ತಮ್ಮ ೨೪ ನೆಯ ವಯಸ್ಸಿನಲ್ಲಿ ಶ್ರೀರಾಮಕೃಷ್ಣಸಂಸ್ಥೆಗೆ ತಮ್ಮನ್ನು ಅರ್ಪಿಸಿಕೊಂಡು ಶ್ರೀಬ್ರಹ್ಮಾನಂದಮಹಾರಾಜರಿಂದ ಸಂನ್ಯಾಸಸ್ವೀಕಾರಮಾಡಿ ಶ್ರೀಶಾರದಾದೇವಿಯವರ ನಿಕಟ ಸೇವೆಯಲ್ಲಿ ನಿರತರಾದರು. ಶ್ರೀಪರಮಹಂಸರ ಸಾಕ್ಷಾತ್ ಶಿಷ್ಯರುಗಳೊಂದಿಗೆ ಅಧ್ಯಾತ್ಮಸಾಧನೆಯಲ್ಲಿ ಮುಂದುವರೆದರು. ಸಂಸ್ಥೆಯ ಪ್ರಕಾಶನಕೇಂದ್ರವಾದ ಅದ್ವೈತಾಶ್ರಮದ ವ್ಯವಸ್ಥಾಪಕರಾದರು. ೧೯೬೧ ರಿಂದ ಸಂಸ್ಥೆಯ ಮಹಾಕಾರ್ಯದರ್ಶಿಗಳಾಗಿದ್ದು ೧೯೬೬ ರಿಂದ ೨೦ ವರ್ಷಗಳ ಕಾಲ ಮಹಾಧ್ಯಕ್ಷರಾಗಿದ್ದು ಸಂಸ್ಥೆಯ ಯಶಸ್ವೀಕಾರ್ಯಕ್ರಮಗಳಿಗೆ ಕಾರಣರಾದರು. ಸ್ವಂತವಾಗಿ ಬರೆದ ಗ್ರಂಥಗಳಲ್ಲದೆ ಭಗವದ್ಗೀತೆ, ಬ್ರಹ್ಮಸೂತ್ರಗಳನ್ನು ಇವರು ಆಂಗ್ಲ ಭಾಷೆಗೆ ಅನುವಾದಮಾಡಿದ್ದಾರೆ. ಸಾವಿರಗಟ್ಟಲೆ ಜನರಿಗೆ ಮಂತ್ರೋಪದೇಶವನ್ನು ನೀಡಿ ಶಿಷ್ಯಕೋಟಿಯನ್ನು ಪೂತರನ್ನಾಗಿಸಿದ್ದಾರೆ. ಈ ಪ್ರಕಟನೆಯ ಲೇಖಕನೂ ಪೂಜ್ಯ ಸ್ವಾಮಿಗಳಿಂದ ಮಂತ್ರದೀಕ್ಷೆಯನ್ನು ಹೊಂದಿರುತ್ತಾನೆಂದು ಭಕ್ತಿಪೂರ್ವಕವಾಗಿ ನಿವೇದಿಸಿ ಪ್ರಣಾಮಗಳನ್ನು ಅರ್ಪಿಸುತ್ತಾನೆ.

---

## ತಿದ್ದುಪಡಿ

"ಅಧ್ಯಾತ್ಮಪ್ರಕಾಶ"ದ 1984 ನೇ ಡಿಸೆಂಬರ್ ಸಂಚಿಕೆಯ ಪುಟ ೮೫ ರಲ್ಲಿ ಇರುವ ವಿಷಯಗಳಲ್ಲಿ ಅಲೆಕ್ಸಾಂಡರ್ ಚಕ್ರವರ್ತಿಗೆ ಉತ್ತರಿಸಿದ ಮಹನೀಯನು 'Diogenes' ಎಂಬವನೆಂದೂ ಭಾರತದ ಋಷಿಯಲ್ಲವೆಂದೂ ವಾಚಕರೊಬ್ಬರು ತಿಳಿಸಿದ್ದಾರೆ. ಈ ಸಂಶೋಧನಾತ್ಮಕ ತಿದ್ದುಪಡಿಯನ್ನು ಸೂಚಿಸಿದ್ದಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

—ಸಂಪಾದಕ.

# ರಾಮ-ರಾವಣವೈಲಕ್ಷಣ್ಯ

(ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಕಾವ್ಯಗಳಲ್ಲಿ ಮಾಡಿರುವ ಉಪದೇಶಗಳು ಶ್ರುತಿಸ್ಮೃತಿಗಳ ಉಪದೇಶಗಳಿಗಿಂತಲೂ ಹೆಚ್ಚು ಬಲವಾಗಿ ಮಾನವನ ಹೃದಯವನ್ನು ಹಿಡಿಯಬಲ್ಲದು- ಎಂದು ಸಾಹಿತ್ಯಶಾಸ್ತ್ರಜ್ಞರು ಹೇಳುತ್ತಾರೆ. ರಾಮನಂತೆ ನಡೆಯಬೇಕು, ರಾವಣನಂತೆ ನಡೆಯಬಾರದು-ಎಂಬಿದನ್ನು ಬಹಳ ಸರಸವಾದ ರೀತಿಯಿಂದ ಮನುಷ್ಯನಿಗೆ ತಿಳಿಸಿಕೊಡುವದು ಕಾವ್ಯಗಳಲ್ಲಿ ಇರುವ ಒಂದು ವಿಶೇಷವಾಗಿದೆ.

ಆದಿಕವಿಗಳಾದ ವಾಲ್ಮೀಕಿಗಳು ಬರೆದ ರಾಮಾಯಣದಲ್ಲಿ ಕಂಡುಬರುವ ಈ ಉಪದೇಶವನ್ನು ಮನಸ್ಸಿಗೆ ತಂದುಕೊಂಡವರು ತಮಗೂ ಅರಿವಿಲ್ಲದಂತೆಯೇ ಶ್ರೀರಾಮನ ಸದ್ಗುಣಗಳನ್ನು ತಮ್ಮ ಅಂತಃಕರಣದಲ್ಲಿ ಮೂಡಿಸಿಕೊಂಡು ಆದರ್ಶ ಪುರುಷರಾಗಬಹುದು. ಇಂಥ ಧ್ಯೇಯಗಳನ್ನು ಜನರ ಮುಂದೆ ಇಟ್ಟ ಮಹಾತ್ಮರ ಕಾವ್ಯಗಳು ಮನುಷ್ಯರನ್ನು ದೇವತೆಗಳಾಗುನಂತೆ ತಿರುಗಿಸಬಲ್ಲನೆಂಬುದಕ್ಕೆ ಅನೇಕ ಉದಾಹರಣೆಗಳಿವೆ.

ಆದರೆ ವಿಜ್ಞಾನಶಾಸ್ತ್ರದ ಅದ್ಭುತಗಳನ್ನು ಮನಸ್ಸಿಗೆ ತಂದುಕೊಂಡವರಿಗೆ ರಾಮಾಯಣವನ್ನು ಓದದೆಯೇ ರಾವಣನ ಆದರ್ಶವು ಮನಮೆಚ್ಚಾಗುವ ಸಂಭವವಿದೆ. ವೇಗದಿಂದ ಸಂಚಾರಮಾಡುವದು, ಅತಿಸ್ವಲ್ಪಕಾಲದಲ್ಲಿ ಅತ್ಯಂತ ಸುಲಭರೀತಿಯಿಂದ ಯಂತ್ರಗಳನ್ನು ಉಪಯೋಗಿಸಿಕೊಂಡು ಇಹಲೋಕದ ಭೋಗಗಳನ್ನು ರಾಶಿಹಾಕಿಕೊಳ್ಳುವದು, ತಮ್ಮ ಸುತ್ತಲಿನ ಜನರನ್ನು ವಿಜ್ಞಾನದ ಬಲದಿಂದ ವಶಪಡಿಸಿಕೊಂಡು ಅವರನ್ನು ತಮ್ಮ ಇಷ್ಟಾರ್ಥವನ್ನು ನಡೆಯಿಸಿಕೊಡುವ ಯಂತ್ರಗಳಾಗಿ ಮಾರ್ಪಡಿಸಿಕೊಳ್ಳುವದು, ದಂಭ, ದರ್ಪ, ಅಹಂಕಾರ, ಹಿಂಸೆ, ಅಸತ್ಯ, ಅನಾಚಾರ- ಮುಂತಾದವುಗಳನ್ನೇ ಹೆಚ್ಚೆಂದು ಪ್ರಚಾರಪಡಿಸುವದು, ಮಾರಕಾಸ್ತ್ರಗಳನ್ನು ಒದಗಿಸಿಕೊಟ್ಟು ದೇಶಗಳನ್ನು ಪರಸ್ಪರವಾಗಿ ಯುದ್ಧಕ್ಕೆ ಪ್ರಚೋದಿಸುವದು, ಬಾಯಿಮಾತಿನಲ್ಲಿ ಶಾಂತಿಸ್ಥಾಪನೆಗೆ ಮುಂದೆಬರುವಂತೆ ತೋರ್ಪಡಿಸಿಕೊಳ್ಳುವದು- ಹೀಗೆ ಮಾಡಬಲ್ಲ ದಶಕಂಠರಾವಣರಲ್ಲ- ಶತಕಂಠ ಸಹಸ್ರಕಂಠ, ದಶಸಹಸ್ರಕಂಠರಾವಣರೂ ಈಗ ಭೂಲೋಕದಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಏನೂ ತಿಳಿಯದ ಮೂಢಜನರು ಈ ರಾವಣರ ಮಾಯಾಜಾಲಕ್ಕೆ ಸಿಕ್ಕಿ ನೆಮ್ಮದಿಯ ಜೀವನವನ್ನು ಕಳೆದುಕೊಂಡು ದಿಕ್ಕುತೋಚದೆ ಕಂಗಾಲಾಗಿರುತ್ತಾರೆ.

ಈ ಭೂಮಿಗೆ ಅಯೋಧ್ಯಾನಗರಿ (ಯುದ್ಧವಿಲ್ಲದ ನಗರಿ) ರಾಜಧಾನಿಯಾಗಬೇಕೆ? ರಾಮರಾಜ್ಯ (ಎಲ್ಲರಿಗೂ ಮನೋರಂಜಕವಾದ ರಾಜ್ಯ)ವೇ ನೆಲಸಬೇಕೆ? ರಾಮನ ಚರಿತ್ರೆಯನ್ನೇ ಮತ್ತೆ ಮತ್ತೆ ಮನದಲ್ಲಿ ಹೊರಳಾಡಿಸುತ್ತಿರಿ; ರಾವಣನ ಮಾಯಾರಾಜ್ಯದ ಜಯವು ಮೂರುದಿನದ ಬಾಳು, ಅಶಾಂತಿ-ಅಸುಖಗಳ ಬೀಡು, ಎಂದು ಮನದಟ್ಟುಮಾಡಿಕೊಳ್ಳಿರಿ.

---

**ಯಾನಿ ರತ್ನಾನಿ ಮಣಯೋ ಗಜಾಶ್ವಾದೀನಿ ವೈ ಪ್ರಭೋ ।**
**ತ್ರೈಲೋಕ್ಯೇ ತು ಸಮಸ್ತಾನಿ ಸಾಂಪ್ರತಂ ಭಾಂತಿ ತೇ ಗೃಹೇ ||೪೫||**
**ಐರಾವತಃ ಸಮಾನೀತೋ ಗಜರತ್ನಂ ಪುರಂದರಾತ್ ।**
**ಪಾರಿಜಾತತರುಶ್ಚಾಯಂ ತಥೈವೋಚ್ಚೈಃಶ್ರವಾ ಹಯಃ ||೪೬||**
**ವಿಮಾನಂ ಹಂಸಸಂಯುಕ್ತಮೇತತ್ತಿಷ್ಠತಿ ತೇಽಂಗಣೇ ।**
**ರತ್ನಭೂತಮಿಹಾನೀತಂ ಯದಾಸೀದ್ವೇಧಸೋಽದ್ಭುತಮ್ ||**

೪೫–೪೭. 'ಪ್ರಭುವೆ, ಮೂರು ಲೋಕಗಳಲ್ಲಿಯೂ ಯಾವ ಯಾವ (ದಿವ್ಯ)ರತ್ನಗಳು, ಮಣಿಗಳು, ಆನೆ, ಕುದುರೆಗಳು—ಮುಂತಾದ ಎಲ್ಲಾ ಪದಾರ್ಥಗಳಿವೆಯೋ ಅವೆಲ್ಲವೂ ನಿನ್ನ ಮನೆಯಲ್ಲಿಯೇ ಇದ್ದುಕೊಂಡಿವೆ. ಇಂದ್ರನ ಕಡೆಯಿಂದ ಐರಾವತವೆಂಬ ಶ್ರೇಷ್ಠವಾದ ಆನೆಯೂ ಹಾಗೆಯೇ ಪಾರಿಜಾತವೆಂಬ ವೃಕ್ಷವೂ ಉಚ್ಚೈಃಶ್ರವಸ್ಸೆಂಬ ಕುದುರೆಯೂ ತರಲ್ಪಟ್ಟಿವೆ. ಬ್ರಹ್ಮದೇವನ ಅದ್ಭುತವಾದ ಹಂಸಯುಕ್ತವಾದ ಯಾವ ವಿಮಾನವಿತ್ತೋ ಅದು ರತ್ನಪ್ರಾಯವಾಗಿತ್ತು. ಈಗ ಅದುಕೂಡ ನಿನ್ನ(ಅರಮನೆಯ)ಅಂಗಳದಲ್ಲೇ ಇದ್ದುಕೊಂಡಿದೆ.

**ನಿಧಿರೇಷ ಮಹಾಪದ್ಮಃ ಸಮಾನೀತೋ ಧನೇಶ್ವರಾತ್ ।**
**ಕಿಂಜಲ್ಕಿನೀಂ ದದೌ ಚಾಬ್ಧಿಃ ಮಾಲಾಮಮ್ಲಾನಪಂಕಜಾಮ್ ||೪೮||**
**ಛತ್ರಂ ತೇ ವಾರುಣಂ ಗೇಹೇ ಕಾಂಚನಸ್ರಾವಿ ತಿಷ್ಠತಿ ।**
**ತಥಾಯಂ ಸ್ಯಂದನವರೋ ಯಃ ಪುರಾಸೀತ್ ಪ್ರಜಾಪತೇಃ ||೪೯||**

೪೮–೪೯. ಧನರಾಜನಾದ ಕುಬೇರನಿಂದ ಈ ಮಹಾಪದ್ಮವೆಂಬ ನಿಧಿಯು ತರಲ್ಪಟ್ಟಿದೆ. ಸಮುದ್ರರಾಜನು ಬಾಡದೆಇರುವ ತಾವರೆಗಳುಳ್ಳ ಕಿಂಜಲ್ಕಿನೀ-ಎಂಬ ಮಾಲೆಯನ್ನು ಕೊಟ್ಟಿರುವನು. ವರುಣನ ಸ್ವತ್ತಾಗಿದ್ದ ಹಾಗೂ ಚಿನ್ನವನ್ನು ಸುರಿಸುವ ಛತ್ರಿಯೂ ನಿನ್ನದಾಗಿದ್ದುಕೊಂಡಿದೆ. ಹಾಗೆಯೇ ಹಿಂದೆ ಪ್ರಜಾಪತಿಯಲ್ಲಿದ್ದ ಶ್ರೇಷ್ಠವಾದ ರಥವೂ ಈಗ ನಿನ್ನ ವಶದಲ್ಲಿಯೇ ಇದೆ.

**ಮೃತ್ಯೋರುತ್ಕ್ರಾಂತಿದಾ ನಾಮ ಶಕ್ತಿರೀಶ ತ್ವಯಾ ಹೃತಾ ।**
**ಪಾಶಃ ಸಲಿಲರಾಜಸ್ಯ ಭ್ರಾತುಸ್ತವ ಪರಿಗ್ರಹೇ ||೫೦||**
**ನಿಶುಂಭಸ್ಯಾಬ್ಧಿಜಾತಾಶ್ಚ ಸಮಸ್ತಾ ರತ್ನಜಾತಯಃ ।**
**ವಹ್ನಿಶ್ಚಾಪಿ ದದೌ ತುಭ್ಯಮಗ್ನಿಶೌಚೇ ಚ ವಾಸಸೀ ||೫೧||**
**ಏವಂ ದೈತ್ಯೇಂದ್ರ ರತ್ನಾನಿ ಸಮಸ್ತಾನ್ಯಾಹೃತಾನಿ ತೇ ।**
**ಸ್ತ್ರೀರತ್ನಮೇಷಾ ಕಲ್ಯಾಣೀ ತ್ವಯಾ ಕಸ್ಮಾನ್ನ ಗೃಹ್ಯತೇ ||೫೨||**

೫೦–೫೨. ಎಲೈ ಒಡೆಯನೆ, ಮೃತ್ಯುದೇವತೆಯ ಉತ್ಕ್ರಾಂತಿದಾ-ಎಂಬ ಹೆಸರಿನ ಶಕ್ತ್ಯಾಯುಧವನ್ನು ನೀನೇ ಕಸಿದುಕೊಂಡಿದ್ದೀಯೆ. ವರುಣನ

ಪಾಶವಾದರೊ, ನಿನ್ನ ಸಹೋದರನ ಸ್ವಾಧೀನದಲ್ಲಿದೆ. ಅಗ್ನಿದೇವನು ಕೂಡ ನಿನಗೆ ವಹ್ನಿಶುದ್ಧವಾದ ಎರಡು ವಸ್ತ್ರಗಳನ್ನು ಸಮರ್ಪಿಸಿರುವನು. ಎಲೈ ದೈತ್ಯರಾಜನೆ, ಹೀಗೆ ನೀನು ಎಲ್ಲಾ ರತ್ನ(ಪ್ರಾಯ)ವಾದ ವಸ್ತುಗಳನ್ನೂ ಅಪಹರಿಸಿರುವೆ. ಹೀಗಿರುವಲ್ಲಿ ಈ ಮಂಗಳಾಂಗಿಯಾದ ಸ್ತ್ರೀರತ್ನಳನ್ನು ನೀನೇಕೆ ಸ್ವೀಕರಿಸದಿರುವೆ ?

**ಋಷಿರುವಾಚ—**

**ನಿಶಮ್ಯೇತಿ ವಚಃ ಶುಂಭಃ ಸ ತದಾ ಚಂಡಮುಂಡಯೋಃ ।**
**ಪ್ರೇಷಯಾಮಾಸ ಸುಗ್ರೀವಂ ದೂತಂ ದೇವ್ಯಾ ಮಹಾಸುರಮ್ ।೫೩॥**
**ಇತಿ ಚೇತಿ ಚ ವಕ್ತವ್ಯಾ ಸಾ ಗತ್ವಾ ವಚನಾತ್ ಮಮ ।**
**ಯಥಾ ಚಾಭ್ಯೇತಿ ಸಂಪ್ರೀತ್ಯಾ ತಥಾ ಕಾರ್ಯಂ ತ್ವಯಾ ಲಘು ।೫೪॥**
**ಸ ತತ್ರ ಗತ್ವಾ ಯತ್ರಾಸ್ತೇ ಶೈಲೋದ್ದೇಶೇಽತಿಶೋಭನೇ ।**
**ಸಾ ದೇವೀ ತಾಂ ತತಃ ಪ್ರಾಹ ಶ್ಲಕ್ಷ್ಣಂ ಮಧುರಯಾ ಗಿರಾ ।೫೫॥**

೫೩-೫೫. ಋಷಿಯಿಂತೆಂದನು : ಆಗ ಶುಂಭನು ಚಂಡಮುಂಡರ ಈ ಮಾತುಗಳನ್ನು ಕೇಳಿದವನಾಗಿ ಸುಗ್ರೀವನೆಂಬ ಮಹಾರಾಕ್ಷಸನನ್ನು ದೇವಿಯ ಬಳಿಗೆ ದೂತನನ್ನಾಗಿ ಕಳುಹಿಸಿದನು. ‘ಎಲೈ ದೂತನೆ, ನೀನು ಅವಳ ಬಳಿಗೆ ಹೋಗಿ ನನ್ನ ಮಾತಿನಂತೆ ಹೀಗೆ ಹೀಗೆ ಹೇಳಬೇಕು. ನೀನು ಆಕೆಯು ಸುಲಭವಾಗಿ ಪ್ರೀತಿಯಿಂದ ನನ್ನ ಬಳಿಗೆ ಬರಲು ಹೇಗೆ ಸಾಧ್ಯವಾದಾಳೋ ಹಾಗೆ ಮಾಡಬೇಕು’– ಎಂದನು. ಅವನಾದರೊ, ಬಹಳ ಶೋಭನವಾದ ಬೆಟ್ಟದ ತಪ್ಪಲಿನ ಯಾವ ಸ್ಥಳದಲ್ಲಿ ಆಕೆಯಿದ್ದಳೋ ಅಲ್ಲಿಗೆ ಹೋಗಿ ಆ ದೇವಿಯನ್ನು ಕುರಿತು ಮಧುರವಾದ ಮಾತುಗಳಿಂದ ಮೃದುವಾಗಿ ಹೀಗೆಂದನು :

**ದೂತ ಉವಾಚ—**

**ದೇವಿ ದೈತ್ಯೇಶ್ವರಃ ಶುಂಭಸ್ತ್ರೈಲೋಕ್ಯೇ ಪರಮೇಶ್ವರಃ ।**
**ದೂತೋಽಹಂ ಪ್ರೇಷಿತಸ್ತೇನ ತ್ವತ್ಸಕಾಶಮಿಹಾಗತಃ ।೫೬॥**
**ಅವ್ಯಾಹತಾಜ್ಞಃ ಸರ್ವಾಸು ಯಃ ಸದಾ ದೇವಯೋನಿಷು ।**
**ನಿರ್ಜಿತಾಖಿಲದೈತ್ಯಾರಿಃ ಸ ಯದಾಹ ಶೃಣುಷ್ವ ತತ್ ।೫೭॥**
**ಮಮ ತ್ರೈಲೋಕ್ಯಮಖಿಲಂ ಮಮ ದೇವಾ ವಶಾನುಗಾಃ ।**
**ಯಜ್ಞಭಾಗಾನಹಂ ಸರ್ವಾನುಪಾಶ್ನಾಮಿ ಪೃಥಕ್ ಪೃಥಕ್ ।೫೮॥**

೫೬-೫೮. ದೂತನಿಂತೆಂದನು : ಎಲೌ ದೇವಿಯೆ, (ಕೇಳು), ಶುಂಭನೆಂಬ ಮೂರು ಲೋಕಗಳ ಒಡೆಯನಿಂದ ಕಳುಹಿಸಲ್ಪಟ್ಟ ದೂತನಾದ ನಾನು ಈಗ ನಿನ್ನ ಬಳಿಗೆ ಬಂದಿರುವೆನು. ಯಾವ ಆತನು ಯಾವಾಗಲೂ ಎಲ್ಲಾ ದೇವತೆ

ಗಳಲ್ಲಿಯೂ ತಡೆಯಿಲ್ಲದ ಆಜ್ಞೆಯುಳ್ಳವನಾಗಿದ್ದು ಸಮಸ್ತರಾದ ಅಸುರಶತ್ರುಗಳನ್ನೂ ಗೆದ್ದವನಾಗಿರುವನು. ಆತನೇನು ಹೇಳಿಕಳುಹಿಸಿರುವನೆಂಬುದನ್ನು ಈಗ ಕೇಳು. ಎಲ್ಲಾ ಮೂರು ಲೋಕಗಳೂ ದೇವತೆಗಳೂ ನನಗೆ ಅಧೀನರು. ನಾನೇ ಬೇರೆಬೇರೆಯ (ರೂಪದಿಂದ) ಯಜ್ಞಭಾಗಗಳನ್ನು ಭೋಜನಮಾಡುತ್ತಿರುವೆನು.

**ತ್ರೈಲೋಕ್ಯೇ ವರರತ್ನಾನಿ ಮಮ ವಶ್ಯಾನ್ಯಶೇಷತಃ ।**
**ತಥೈವ ಗಜರತ್ನಂ ಚ ಹೃತ್ವಾ ದೇವೇಂದ್ರವಾಹನಮ್ ॥೫೯॥**
**ಕ್ಷೀರೋದಮಥನೋದ್ಭೂತಮಶ್ವರತ್ನಂ ಮಮಾಮರೈಃ ।**
**ಉಚ್ಚೈಃ ಶ್ರವಸಸಂಜ್ಞಂ ತತ್ ಪ್ರಣಿಪತ್ಯ ಸಮರ್ಪಿತಮ್ ॥೬೦॥**
**ಯಾನಿ ಚಾನ್ಯಾನಿ ದೇವೇಷು ಗಂಧರ್ವೇಷೂರಗೇಷು ಚ ।**
**ರತ್ನಭೂತಾನಿ ಭೂತಾನಿ ತಾನಿ ಮಯ್ಯೇವ ಶೋಭನೇ ॥೬೧॥**

೫೯-೬೧. ಮೂರುಲೋಕಗಳಲ್ಲಿಯೂ ಇರುವ ಶ್ರೇಷ್ಠವಾದ ರತ್ನಗಳೆಲ್ಲವೂ ಪೂರ್ಣವಾಗಿ ನನಗೆ ಅಧೀನವಾಗಿರುವವು. ಹಾಗೆಯೇ ಕ್ಷೀರಸಮುದ್ರಮಥನದಿಂದ ಹುಟ್ಟಿದ ದೇವೇಂದ್ರನ ವಾಹನವಾದ ಆನೆಯೂ ಉಚ್ಚೈಃಶ್ರವಸವೆಂಬ ಶ್ರೇಷ್ಠಕುದುರೆಯೂ ದೇವತೆಗಳಿಂದಲೇ ನಮಸ್ಕಾರಪೂರ್ವಕವಾಗಿ ನನಗೆ ಸಮರ್ಪಿಸಲ್ಪಟ್ಟಿತು. ಹಾಗೆಯೇ ಇನ್ನೂ ದೇವ- ಗಂಧರ್ವ- ಉರಗ ಜಾತಿಯವರಲ್ಲಿ ಯಾವ ಯಾವ ವಸ್ತುಗಳು ರತ್ನಭೂತವಾಗಿರುವವೋ ಈಗ ಅವೆಲ್ಲವೂ ಎಲೌ ಶೋಭನಾಂಗಿಯೆ, ನನ್ನಲ್ಲಿಯೇ ಇದ್ದುಕೊಂಡಿವೆ.

**ಸ್ತ್ರೀರತ್ನಭೂತಾಂ ತ್ವಾಂ ದೇವಿ ಲೋಕೇ ಮನ್ಯಾಮಹೇ ವಯಮ್ ।**
**ಸಾ ತ್ವಮಸ್ಮಾನುಪಾಗಚ್ಛ ಯತೋ ರತ್ನಭುಜೋ ವಯಮ್ ॥೬೨॥**
**ಮಾಂ ವಾ ಮಮಾನುಜಂ ವಾಪಿ ನಿಶುಂಭಮುರುವಿಕ್ರಮಮ್ ।**
**ಭಜ ತ್ವಂ ಚಂಚಲಾಪಾಂಗಿ ರತ್ನಭೂತಾಸಿ ವೈ ಯತಃ ॥೬೩॥**
**ಪರಮೈಶ್ವರ್ಯಮತುಲಂ ಪ್ರಾಪ್ಸ್ಯಸೇ ಮತ್ಪರಿಗ್ರಹಾತ್ ।**
**ಏತತ್ ಬುದ್ಧ್ಯಾ ಸಮಾಲೋಚ್ಯ ಮತ್ಪರಿಗ್ರಹತಾಂ ವ್ರಜ ॥೬೪॥**

೬೨-೬೪. ಎಲೌ ದೇವಿಯೆ, ಲೋಕದಲ್ಲಿ ನೀನು ಸ್ತ್ರೀಯರಲ್ಲಿ ರತ್ನಪ್ರಾಯಳೆಂದು ನಾವು ತಿಳಿದಿರುವೆವು. ನೀನು ನಮ್ಮನ್ನು ಸೇರುವವಳಾಗು; ಏಕೆಂದರೆ ರತ್ನಪ್ರಾಯವಾದವುಗಳನ್ನೇ ನಾವು ಅನುಭವಿಸುತ್ತಿರುವೆವು. ನನ್ನನ್ನಾಗಲಿ, ನನ್ನ ಸೋದರನಾದ ಮಹಾಪರಾಕ್ರಮಶಾಲಿಯಾದ ನಿಶುಂಭನನ್ನಾಗಲಿ ಎಲೌ ಚಂಚಲಾಕ್ಷಿಯೆ, ನೀನು ಸೇವಿಸುವವಳಾಗು; ಏಕೆಂದರೆ ನೀನು ರತ್ನಪ್ರಾಯಳಾಗಿರುವೆ. ನನ್ನನ್ನು ಕೈಹಿಡಿಯುವದರಿಂದ ಪರಮವಾದ

ಐಶ್ವರ್ಯವನ್ನು ಹೊಂದುವೆ. ಇದನ್ನು ಬುದ್ಧಿಯಿಂದ ಚೆನ್ನಾಗಿ ಆಲೋಚಿಸಿ ನನ್ನ ಹೆಂಡತಿಯಾಗು.

**ಋಷಿರುವಾಚ—**

**ಇತ್ಯುಕ್ತಾ ಸಾ ತದಾ ದೇವೀ ಗಂಭೀರಾಂತಃಸ್ಮಿತಾ ಜಗೌ ।**
**ದುರ್ಗಾ ಭಗವತೀ ಭದ್ರಾ ಯಯೇದಂ ಧಾರ್ಯತೇ ಜಗತ್ ॥೬೫॥**

**ದೇವ್ಯುವಾಚ—**

**ಸತ್ಯಮುಕ್ತಂ ತ್ವಯಾ ನಾತ್ರ ಮಿಥ್ಯಾ ಕಿಂಚಿತ್ ತ್ವಯೋದಿತಮ್ ।**
**ತ್ರೈಲೋಕ್ಯಾಧಿಪತಿಃ ಶುಂಭೋ ನಿಶುಂಭಶ್ಚಾಪಿ ತಾದೃಶಃ ॥೬೬॥**

೬೫-೬೬. ಋಷಿಯಿಂತೆಂದನು : ಭಗವತಿಯೂ ಮಂಗಳಪ್ರದಳೂ ಆದ ಹಾಗೂ ಈ ಬ್ರಹ್ಮಾಂಡವನ್ನೆಲ್ಲ (ತನ್ನ ಶಕ್ತಿಯಿಂದ) ಧರಿಸಿರುವ ದುರ್ಗೆಯು ಗಾಢವಾದ ಒಳನಗೆಯುಳ್ಳವಳಾಗಿ (ರಾಕ್ಷಸದೂತನಿಂದ) ಹೀಗೆ ಹೇಳಲ್ಪಟ್ಟವಳಾಗಿ ಅವನಿಗೆ ಉತ್ತರವನ್ನು ಕೊಡುವವಳಾಗಿ ಹೀಗೆಂದಳು: 'ನೀನು ಹೇಳಿದ್ದೆಲ್ಲವೂ ನಿಜವೇ. ಅದರಲ್ಲಿ ಏನೇನೂ ಸುಳ್ಳಿರುವದಿಲ್ಲ. ತ್ರೈಲೋಕ್ಯದೊಡೆಯನಾದ ಶುಂಭನೂ ನಿಶುಂಭನೂ ಅಂಥವರೇ–ಎಂಬುದು ಸರಿ.

**ಕಿಂ ತ್ವತ್ರ ಯತ್ಪ್ರತಿಜ್ಞಾತಂ ಮಿಥ್ಯಾ ತತ್ಕ್ರಿಯತೇ ಕಥಮ್ ।**
**ಶ್ರೂಯತಾಮಲ್ಪಬುದ್ಧಿತ್ವಾತ್ ಪ್ರತಿಜ್ಞಾ ಯಾ ಕೃತಾ ಪುರಾ ॥೬೭॥**
**ಯೋ ಮಾಂ ಜಯತಿ ಸಂಗ್ರಾಮೇ ಯೋ ಮೇ ದರ್ಪಂ ವ್ಯಪೋಹತಿ।**
**ಯೋ ಮೇ ಪ್ರತಿಬಲೋ ಲೋಕೇ ಸ ಮೇ ಭರ್ತಾ ಭವಿಷ್ಯತಿ ॥೬೮॥**
**ತದಾಗಚ್ಛತು ಶುಂಭೋಽತ್ರ ನಿಶುಂಭೋ ವಾ ಮಹಾಸುರಃ ।**
**ಮಾಂ ಜಿತ್ವಾ ಕಿಂ ಚಿರೇಣಾತ್ರ ಪಾಣಿಂ ಗೃಹ್ಣಾತು ಮೇ ಲಘು ॥೬೯॥**

೬೭-೬೯. ಆದರೆ ಈ ಸಂದರ್ಭದಲ್ಲಿ ನಾನು ಏನು ಪ್ರತಿಜ್ಞೆಮಾಡಿರುವೆನೋ ಅದನ್ನು ಹೇಗೆ ಸುಳ್ಳಾಗಿಸಲಿ? ಹಿಂದೆ ನಾನು ತಿಳಿವಳಿಕೆಯು ಸಾಲದೆ ಏನು ಪ್ರತಿಜ್ಞೆಮಾಡಿದ್ದೆನೋ ಅದನ್ನು ಕೇಳು. ಯಾವನು ಯುದ್ಧದಲ್ಲಿ ನನ್ನನ್ನು ಗೆದ್ದು ನನ್ನ ದರ್ಪವನ್ನು ಹೋಗಲಾಡಿಸಲಿರುವನೋ ಹಾಗೂ ಯಾವನು ನನಗೆ ಸರಿಯಾದ ಎದುರಾಳಿಯಾಗಬಲ್ಲನೋ ಅವನೇ ನನಗೆ ಗಂಡನಾಗಲಿ-ಎಂದು (ಶಪಥ ಮಾಡಿದ್ದೇನೆ). ಆದ್ದರಿಂದ ಮಹಾಸುರನಾದ ಶುಂಭನಾಗಲಿ, ನಿಶುಂಭನಾಗಲಿ–ಇಲ್ಲಿಗೆ ಬರಲಿ ; ನನ್ನನ್ನು ಗೆದ್ದು ಕೈಹಿಡಿಯಲಿ. ಈ ವಿಷಯದಲ್ಲಿ ತಡವೇಕೆ?'

**ದೂತ ಉವಾಚ—**

**ಅವಲಿಪ್ತಾಸಿ ಮೈವಂ ತ್ವಂ ದೇವಿ ಬ್ರೂಹಿ ಮಮಾಗ್ರತಃ ।**
**ತ್ರೈಲೋಕ್ಯೇ ಕಃ ಪುಮಾಂಸ್ತಿಷ್ಠೇದಗ್ರೇ ಶುಂಭನಿಶುಂಭಯೋಃ ॥೭೦॥**

**ಅನ್ಯೇಷಾಮಪಿ ದೈತ್ಯಾನಾಂ ಸರ್ವೇ ದೇವಾ ನ ವೈ ಯುಧಿ ।**
**ತಿಷ್ಠಂತಿ ಸಮ್ಮುಖೇ ದೇವಿ ಕಿಂ ಪುನಃ ಸ್ತ್ರೀ ತ್ವಮೇಕಿಕಾ ॥೭೧॥**

೭೦–೭೧. ದೂತನಿಂತೆಂದನು ; 'ಎಲೌ ದೇವಿಯೆ, ನೀನು ಬಹಳ ಗರ್ವಿಷ್ಠಳಾಗಿರುವೆ. ಹೀಗೆಲ್ಲ ನನ್ನೆದುರಿಗೆ ಮಾತನಾಡದಿರು. ಶುಂಭನಿಶುಂಭರೆದುರಿಗೆ ಈ ಮೂರು ಲೋಕಗಳಲ್ಲಿಯಾಗಲಿ, ಯಾವ ಗಂಡಸು ತಾನೆ ಎದುರಿಗೆ ನಿಂತಾನು ? ಉಳಿದ ರಾಕ್ಷಸರುಗಳ (ಮುಂದೆಯೂ) ಎಲ್ಲಾ ದೇವತೆಗಳೂ ಕೂಡಿಯಾದರೂ ಯುದ್ಧದಲ್ಲಿ ಎದುರು ನಿಲ್ಲಲಾರದು. ಹೀಗಿರುವಲ್ಲಿ ಹೆಂಗಸಾಗಿರುವ ನೀನೊಬ್ಬಳು ಹೇಗೆ ತಾನೆ ಎದುರಿಸಿ ನಿಂತುಕೊಳ್ಳಬಲ್ಲೆ ?

**ಇಂದ್ರಾದ್ಯಾಃ ಸಕಲಾ ದೇವಾಸ್ತಸ್ಥುರ್ಯೇಷಾಂ ನ ಸಂಯುಗೇ ।**
**ಶುಂಭಾದೀನಾಂ ಕಥಂ ತೇಷಾಂ ಸ್ತ್ರೀ ಪ್ರಯಾಸ್ಯಸಿ ಸಂಮುಖಮ್ ॥**
**ಸಾ ತ್ವಂ ಗಚ್ಛ ಮಯೈವೋಕ್ತಾ ಪಾರ್ಶ್ವಂ ಶುಂಭನಿಶುಂಭಯೋಃ ।**
**ಕೇಶಾಕರ್ಷಣನಿರ್ಧೂತಗೌರವಾ ಮಾ ಗಮಿಷ್ಯಸಿ ॥೭೩॥**

೭೨–೭೩. ಇಂದ್ರನೇ ಮೊದಲಾದ ಸಮಸ್ತರಾದ ದೇವತೆಗಳೂ ಯಾರ ಮುಂದೆ ಯುದ್ಧದಲ್ಲಿ ನಿಲ್ಲಲಾರದೆ ಹೋದರೋ ಅಂಥ ಶುಂಭಾದಿ (ರಾಕ್ಷಸರ) ಮುಂದೆ ಸ್ತ್ರೀಯಾದ ನೀನು ಹೇಗೆ ತಾನೆ ಎದುರಾಳಿಯಾಗಿ ಹೋದೀಯೆ ? ಆದ್ದರಿಂದ ಈಗ ನಾನು ಹೇಳಿದುದನ್ನು ಕೇಳಿಕೊಂಡು ಶುಂಭನಿಶುಂಭರ ಬಳಿಗೆ ಹೋಗುವವಳಾಗು. ಆದರೆ ತಲೆಗೂದಲನ್ನು ಹಿಡಿದು ಎಳೆದು ತರುವ ಮೂಲಕ ಗೌರವವನ್ನೆಂದಿಗೂ ಕೆಡಿಸಿಕೊಳ್ಳಬೇಡ.

**ದೇವ್ಯುವಾಚ—**

**ಏವಮೇತದ್ ಬಲೀ ಶುಂಭೋ ನಿಶುಂಭಶ್ಚಾತಿವೀರ್ಯವಾನ್ ।**
**ಕಿಂ ಕರೋಮಿ ಪ್ರತಿಜ್ಞಾ ಮೇ ಯದನಾಲೋಚಿತಾ ಪುರಾ ॥೭೪॥**
**ಸ ತ್ವಂ ಗಚ್ಛ ಮಯೋಕ್ತಂ ತೇ ಯದೇತತ್ ಸರ್ವಮಾದೃತಃ ।**
**ತದಾಚಕ್ಷ್ವಾಸುರೇಂದ್ರಾಯ ಸ ಚ ಯುಕ್ತಂ ಕರೋತು ತತ್ ।**

೭೪–೭೫. ದೇವಿಯಿಂತೆಂದಳು : ನಿಶುಂಭನೂ ಶುಂಭನೂ ಅತಿ ಹೆಚ್ಚಿನ ಬಲಿಷ್ಠರೆಂಬುದು ಸರಿಯೇ. ಆದರೆ ಹಿಂದೆ ನಾನು ಆಲೋಚನೆಯನ್ನು ಮಾಡದೆ ಸ್ವೀಕರಿಸಿರುವ ಶಪಥದ ವಿಷಯಕ್ಕೆ ಈಗೇನು ಮಾಡಲಿ ? ಆದ್ದರಿಂದ ನೀನು ಈಗ ಹೊರಡು. ನಾನು ಹೇಳಿದುದೆಲ್ಲವನ್ನೂ ಶ್ರದ್ಧೆಯಿಂದ ಆ ಅಸುರಶ್ರೇಷ್ಠನಿಗೆ ಹೇಳುವವನಾಗು. ಅವನು ಯುಕ್ತವೆಂದು ಕಂಡದ್ದನ್ನು ಮಾಡಲಿ.

ಇತಿ ಶ್ರೀ ಮಾರ್ಕಂಡೇಯಪುರಾಣೇ ದೇವೀಮಾಹಾತ್ಮ್ಯೇ
ಪಂಚಮೋಽಧ್ಯಾಯಃ



# ಆರನೆಯ ಅಧ್ಯಾಯ

**ಧ್ಯಾನಮ್.—**

**ನಾಗಾಧೀಶ್ವರವಿಷ್ಟರಾಂ ಫಣಿಫಣೋತ್ತಂಸೋರುರತ್ನಾವಳೀ-**
**ಭಾಸ್ವದ್ದೇಹಲತಾಂ ದಿವಾಕರನಿಭಾಂ ನೇತ್ರತ್ರಯೋದ್ಭಾಸಿತಾಮ್ ।**
**ಮಾಲಾಕುಂಭಕಪಾಲನೀರಜಕರಾಂ ಚಂದ್ರಾರ್ಧಚೂಡಾಂ ಪರಾಂ**
**ಸರ್ವಜ್ಞೇಶ್ವರಭೈರವಾಂಕನಿಲಯಾಂ ಪದ್ಮಾವತೀಂ ಚಿಂತಯೇ ॥**

೧. ಆದಿಶೇಷನನ್ನೇ ಆಸನವಾಗಿ ಮಾಡಿಕೊಂಡು ಆ ನಾಗರಾಜನ ಹೆಡೆಗಳಲ್ಲಿರುವ ರತ್ನಗಳ ಸಾಲುಗಳಂತೆ ಹೊಳೆಯುವ ಬಳುಕುದೇಹವುಳ್ಳ, ಸೂರ್ಯನಂತೆ ಪ್ರಕಾಶಮಾನಳಾದ ಮತ್ತು ಮೂರು ಕಣ್ಣುಗಳಿಂದ ವಿರಾಜಮಾನಳಾದ, ಹಾಗೂ ಹೂಮಾಲೆ, ಕುಂಭ, ಕಪಾಲ, ತಾವರೆಗಳನ್ನು ಕೈಯಲ್ಲಿ ಹಿಡಿದವಳಾದ ಅರ್ಧಚಂದ್ರನನ್ನು ಜಡೆಯಲ್ಲಿ ಮುಡಿದವಳಾದ, ಪರಮಳಾದ ಸರ್ವಜ್ಞನೂ ಎಲ್ಲಕ್ಕೂ ಒಡೆಯನೂ ಆದ ಭೈರವನ ತೊಡೆಯಲ್ಲಿ ಕುಳಿತಿರುವ ಪದ್ಮಾವತಿಯನ್ನು ಚಿಂತಿಸುವೆನು.

**ಋಷಿರುವಾಚ—**

**ಇತ್ಯಾಕರ್ಣ್ಯ ವಚೋ ದೇವ್ಯಾಃ ಸ ದೂತೋಽಮರ್ಷಪೂರಿತಃ ।**
**ಸಮಾಚಷ್ಟ ಸಮಾಗಮ್ಯ ದೈತ್ಯರಾಜಾಯ ವಿಸ್ತರಾತ್ ॥೧॥**
**ತಸ್ಯ ದೂತಸ್ಯ ತದ್ವಾಕ್ಯಮಾಕರ್ಣ್ಯಾಸುರರಾಟ್ ತತಃ ।**
**ಸಕ್ರೋಧಃ ಪ್ರಾಹ ದೈತ್ಯಾನಾಮಧಿಪಂ ಧೂಮ್ರಲೋಚನಮ್ ॥೨॥**

೧-೨. ಋಷಿಯಿಂತೆಂದನು : ದೇವಿಯ ಈ ಮಾತುಗಳನ್ನು ಕೇಳಿ ಕೋಪಗೊಂಡವನಾದ ಆ ದೂತನು ಹಿಂದಿರುಗಿ ಬಂದು ದೈತ್ಯರಾಜನಿಗೆ ವಿಸ್ತಾರವಾಗಿ ಎಲ್ಲವನ್ನೂ ಹೇಳಿಬಿಟ್ಟನು. ಅನಂತರ ಅಸುರರಾಜನಾದ ಆತನು (ಶುಂಭನು) ಆ ದೂತನ ಮಾತನ್ನು ಕೇಳಿ ಕ್ರೋಧವಶನಾಗಿ ಧೂಮ್ರಲೋಚನನೆಂಬ ದೈತ್ಯರ ಒಡೆಯನಿಗೆ ಹೀಗೆಂದನು :

**ಹೇ ಧೂಮ್ರಲೋಚನಾಶು ತ್ವಂ ಸ್ವಸೈನ್ಯಪರಿವಾರಿತಃ ।**
**ತಾಮಾನಯ ಬಲಾದ್ದುಷ್ಟಾಂ ಕೇಶಾಕರ್ಷಣವಿಹ್ವಲಾಮ್ ॥೩॥**
**ತತ್ಪರಿತ್ರಾಣದಃ ಕಶ್ಚಿತ್ ಯದಿ ವೋತ್ತಿಷ್ಠತೇಽಪರಃ ।**
**ಸ ಹಂತವ್ಯೋಽಮರೋ ವಾಪಿ ಯಕ್ಷೋ ಗಂಧರ್ವ ಏವ ವಾ ॥೪॥**

೩-೪. 'ಎಲೈ ಧೂಮ್ರಲೋಚನನೆ, ನಿನ್ನ ಸೈನ್ಯದೊಡನೆ ಕೂಡಿ ಜಾಗ್ರತೆಯಾಗಿ (ಹೊರಟು) ಬಲಾತ್ಕಾರವಾಗಿ ಆ ದುಷ್ಟಳಾದ ಹಾಗೂ ಜಡೆ

ಯನ್ನೆಳೆಸಿಕೊಳ್ಳಲು ತವಕಪಡುತ್ತಿರುವ (ದೇವಿಯನ್ನು) ಕರೆದು ತರುವನಾಗು. ಒಂದು ವೇಳೆ ಯಾವನಾದರೂ ಆಕೆಯನ್ನು ಕಾಪಾಡಲು ಮೇಲೆ ಬಿದ್ದನಾದರೆ ಅವನು ದೇವತೆಯಾಗಿರಲಿ, ಯಕ್ಷ-ಗಂಧರ್ವನಾಗಿರಲಿ-ಅಂಥವನನ್ನು ಕೊಂದು ಬಿಡುವವನಾಗು.

ಋಷಿರುವಾಚ—

**ತೇನಾಜ್ಞಪ್ತಃ ತತಃ ಶೀಘ್ರಂ ಸ ದೈತ್ಯೋ ಧೂಮ್ರಲೋಚನಃ ।**
**ವೃತಃ ಷಷ್ಟ್ಯಾ ಸಹಸ್ರಾಣಾಮಸುರಾಣಾಂ ದ್ರುತಂ ಯಯೌ ॥೫॥**
**ಸ ದೃಷ್ಟ್ವಾ ತಾಂ ತತೋ ದೇವೀಂ ತುಹಿನಾಚಲಸಂಸ್ಥಿತಾಮ್ ।**
**ಜಗಾದೋಚ್ಚೈಃ ಪ್ರಯಾಹೀತಿ ಮೂಲಂ ಶುಂಭನಿಶುಂಭಯೋಃ ॥೬॥**

೫-೬. ಋಷಿಯಿಂತೆಂದನು. ಅನಂತರ ಬೇಗನೆ ಆಜ್ಞಾಪಿಸಲ್ಪಟ್ಟ ಧೂಮ್ರಲೋಚನನೆಂಬ ದೈತ್ಯನು ಅರುವತ್ತುಸಾವಿರ ರಾಕ್ಷಸರೊಡಗೂಡಿದವನಾಗಿ ವೇಗದಿಂದ ಹೊರಟನು. ಅವನು ಆ ಮೇಲೆ ಹಿಮಗಿರಿಯಲ್ಲಿ ನೆಲೆಸಿದ್ದ ಆ ದೇವಿಯನ್ನು ಕಂಡು "ಶುಂಭನಿಶುಂಭರ ಬಳಿಗೆ ಬಾ" ಎಂದು ಗಟ್ಟಿಯಾಗಿ ಕೂಗಿಕೊಂಡನು.

**ನ ಚೇತ್ ಪ್ರೀತ್ಯಾದ್ಯ ಭವತೀ ಮದ್ಭರ್ತಾರಮುಪೈಷ್ಯತಿ ।**
**ತತೋ ಬಲಾನ್ನಯಾಮ್ಯೇಷ ಕೇಶಾಕರ್ಷಣವಿಹ್ವಲಾಮ್ ॥೭॥**

೭. ನೀನು ಸಂತೋಷದಿಂದ ಈಗ ನನ್ನೊಡೆಯನನ್ನು ಸೇರಲಾರೆಯಾದರೆ ಅನಂತರ ಈ ನಾನು ಜಡೆಗಳನ್ನೆಳೆಸಿಕೊಳ್ಳಲು ಆಶಿಸುವ ನಿನ್ನನ್ನು ಬಲಾತ್ಕಾರದಿಂದ ಕರೆದೊಯ್ಯುವೆನು-(ಎಂದನು).

ದೇವ್ಯುವಾಚ—

**ದೈತ್ಯೇಶ್ವರೇಣ ಪ್ರಹಿತೋ ಬಲವಾನ್ ಬಲಸಂವೃತಃ ।**
**ಬಲಾನ್ನಯಸಿ ಮಾಮೇವ ತತಃ ಕಿಂ ತೇ ಕರೋಮ್ಯಹಮ್ ॥೮॥**

೮. ದೇವಿಯಿಂತೆಂದಳು : ದೈತ್ಯರಾಜನಿಂದ ಕಳುಹಿಸಲ್ಪಟ್ಟ ಬಲಿಷ್ಠನೂ (ಸೇನಾ) ಬಲಪರಿವಾರಿತನೂ ಆದ ನೀನು ಬಲಾತ್ಕಾರದಿಂದ ನನ್ನನ್ನೇ ಕರೆದೊಯ್ಯುವೆಯಾದರೆ ಇನ್ನು ನಿನಗೆ ನಾನೇನು ಮಾಡಿಯೇನು ?

ಋಷಿರುವಾಚ—

**ಇತ್ಯುಕ್ತಃ ಸೋಽಭ್ಯಧಾವತ್ತಾಮಸುರೋ ಧೂಮ್ರಲೋಚನಃ ।**
**ಹುಂಕಾರೇಣೈವ ತಂ ಭಸ್ಮ ಸಾ ಚಕಾರಾಂಬಿಕಾ ತತಃ ॥೯॥**
**ಅಥ ಕ್ರುದ್ಧಂ ಮಹಾಸೈನ್ಯಮಸುರಾಣಾಂ ತಥಾಂಬಿಕಾ ।**
**ವವರ್ಷ ಸಾಯಕೈಸ್ತೀಕ್ಷ್ಣೈಃ ತಥಾ ಶಕ್ತಿಪರಶ್ವಧೈಃ ॥೧೦॥**

೯-೧೦. ಋಷಿಯಿಂತೆಂದನು : ಹೀಗೆ ಹೇಳಲ್ಪಟ್ಟ ಆ ಧೂಮ್ರಲೋಚನ ನೆಂಬ ರಾಕ್ಷಸನು (ದೇವಿಯನ್ನು ಅಬಲೆಯೆಂದು ಭಾವಿಸಿ) ಮೇಲೆ ನುಗ್ಗಿದನು. ಅನಂತರ ಅಂಬಿಕೆಯು ಹುಂಕಾರಮಾತ್ರದಿಂದಲೇ ಅವನನ್ನು ಸುಟ್ಟು ಬೂದಿ ಮಾಡಿಬಿಟ್ಟಳು. ಅನಂತರ ಕೋಪಗೊಂಡು (ನುಗ್ಗಿದ ಆ) ರಾಕ್ಷಸರ ಮಹಾಸೈನ್ಯವನ್ನೆಲ್ಲ ಚೂಪಾದ ಬಾಣಗಳು, ಶಕ್ತಿ ಪರಶ್ವಧಗಳೆಂಬ ಆಯುಧ ಗಳಿಂದಲೂ ಮಳೆಗರೆದು (ತುಂಬಿದಳು).

**ತತೋ ಧುತಸಟಃ ಕೋಪಾತ್ ಕೃತ್ವಾ ನಾದಂ ಸುಭೈರವಮ್ ।**
**ಪಪಾತಾಸುರಸೇನಾಯಾಂ ಸಿಂಹೋ ದೇವ್ಯಾಃ ಸ್ವವಾಹನಃ ॥೧೧॥**
**ಕಾಂಶ್ಚಿತ್ ಕರಪ್ರಹಾರೇಣ ದೈತ್ಯಾನಾಸ್ಯೇನ ಚಾಪರಾನ್ ।**
**ಆಕ್ರಮ್ಯ ಚಾಧರೇಣಾನ್ಯಾನ್ ಸ ಜಘಾನ ಮಹಾಸುರಾನ್ ॥೧೨॥**

೧೧-೧೨. ಅನಂತರ ತನ್ನ ಕೇಸರಗಳನ್ನು ಕೊಡವುತ್ತಾ ಭಯಂಕರ ವಾಗಿ ಗರ್ಜಿಸುತ್ತಾ ಕೋಪದಿಂದ ದೇವಿಯ ವಾಹನವಾದ ಸಿಂಹವು ಸೈನ್ಯದ ಮೇಲೆ ಬಿದ್ದಿತು. ಕೆಲವರನ್ನು ತನ್ನ ಕೈ (ಮುಂಗಾಲುಗಳ) ಹೊಡೆತದಿಂದ ಲೂ ಮತ್ತೆ ಕೆಲವರನ್ನು ಮುಖದಿಂದ ಕಚ್ಚುವದರಿಂದಲೂ ಉಳಿದವರನ್ನು ಹಿಂಭಾಗದ (ಕಾಲುಗಳಿಂದಲೂ) ಆಕ್ರಮಣಮಾಡಿ ಮಹಾರಾಕ್ಷಸರನ್ನೆಲ್ಲ ಅದು ಕೊಂದಿತು.

**ಕೇಷಾಂಚಿತ್ ಪಾಟಯಾಮಾಸ ನಖೈಃ ಕೋಷ್ಠಾನಿ ಕೇಸರೀ ।**
**ತಥಾ ತಲಪ್ರಹಾರೇಣ ಶಿರಾಂಸಿ ಕೃತವಾನ್ ಪೃಥಕ್ ॥೧೩॥**
**ವಿಚ್ಛಿನ್ನಬಾಹುಶಿರಸಃ ಕೃತಾಸ್ತೇನ ತಥಾಪರೇ ।**
**ಪಪೌ ಚ ರುಧಿರಂ ಕೋಷ್ಠಾದನ್ಯೇಷಾಂ ಧುತಕೇಸರಃ ॥೧೪॥**

೧೩-೧೪. ಆ ಸಿಂಹವು ಕೆಲವರ ಹೊಟ್ಟೆಗಳನ್ನು ಉಗುರುಗಳಿಂದ ಸೀಳಿತು. ಹಾಗೆಯೇ ಪಂಜಗಳಿಂದ (ಕೆಲವರ) ತಲೆಗಳನ್ನು ತುಂಡುಮಾಡಿತು. ಇನ್ನು ಕೆಲವರು ತಲೆತೋಳುಗಳನ್ನು ಕತ್ತರಿಸಿಕೊಂಡು ಬೀಳಿಸಲ್ಪಟ್ಟರು. ಮತ್ತೆ ಕೆಲವರ ಹೊಟ್ಟೆಯಿಂದ ಆ ಕೆರಳಿದ ಸಿಂಹವು ರಕ್ತವನ್ನು ಕುಡಿಯಿತು.

**ಕ್ಷಣೇನ ತದ್ಬಲಂ ಸರ್ವಂ ಕ್ಷಯಂ ನೀತಂ ಮಹಾತ್ಮನಾ ।**
**ತೇನ ಕೇಸರಿಣಾ ದೇವ್ಯಾ ವಾಹನೇನಾತಿಕೋಪಿನಾ ॥೧೫॥**

೧೫. ಕ್ಷಣಮಾತ್ರದಲ್ಲಿ ಮಹಾಬಲಶಾಲಿಯಾದ ಆ ಸಿಂಹದಿಂದ ಎಲ್ಲ ಸೈನ್ಯವೂ ನಾಶವನ್ನು ಹೊಂದಿತು. ಹೀಗೆ ಅತಿಕೋಪದಿಂದ ಕೂಡಿದ ಆ ದೇವಿಯ ವಾಹನವಾದ ಸಿಂಹವು (ಎಲ್ಲ ರಾಕ್ಷಸರನ್ನೂ ಸಂಹರಿಸಿತು).

# ಕಾರ್ಯಾಲಯದ ಸುದ್ದಿ

(ಮರೆಹಾಳೆಯ ೨ನೆಯ ಪುಟದಿಂದ ಮುಂದುವರೆದದ್ದು)

**ಅನುತಾಪ :** ಅಧ್ಯಾತ್ಮಪ್ರಕಾಶಕಾರ್ಯಾಲಯದ ಕಾರ್ಯಕಾರಿಸಮಿತಿಯ ಉಪಾಧ್ಯಕ್ಷರೂ ಹಿರಿಯ ಸ್ವಾತಂತ್ರ್ಯಹೋರಾಟಗಾರರೂ ಸ್ಥಳೀಯ ಪತ್ರಿಕಾಪ್ರತಿನಿಧಿಗಳೂ ಗಣ್ಯವ್ಯಕ್ತಿಗಳೂ ಜನಾನುರಾಗಿಗಳೂ ಆಗಿದ್ದ ಶ್ರೀ ಹೆಚ್. ಬಿ. ಸತ್ಯನಾರಾಯಣಶೆಟ್ಟರು ತಾ॥ 20-3-1985ನೆಯ ಬುಧವಾರ ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಶ್ರೀಯುತರ ಸೇವೆಯನ್ನು ಸ್ಮರಿಸಿ 21ನೇ ಗುರುವಾರ ಸಂತಾಪ ಸೂಚನಾಸಭೆಯನ್ನು ಏರ್ಪಡಿಸಿ ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಕೋರಿ ಶ್ರದ್ಧಾಂಜಲಿಯನ್ನು ಸಮರ್ಪಿಸಲಾಯಿತು.

**ಗಣ್ಯರ ಭೇಟಿ :** ತಾ॥ 10-3-1985 ರಂದು ಭಾನುವಾರ ಬೆಂಗಳೂರಿನ ಖೋಡೆ ಗ್ರೂಪ್ ಆಫ್ ಇಂಡಸ್ಟ್ರೀಸ್ ಮಾಲಿಕರೂ ಗುರುದೇವತಾಭಕ್ತರೂ ಆದ ಶ್ರೀ ರಾಮಚಂದ್ರಸಾ ಖೋಡೆಯವರು ಕಾರ್ಯಾಲಯಕ್ಕೆ ಭೇಟಿ ನೀಡಿ ಸಂಸ್ಥೆಯ ಚಟುವಟಿಕೆಗಳನ್ನೂ ಆಡಳಿತನಿರ್ವಹಣೆಯನ್ನೂ ವೀಕ್ಷಿಸಿ ಸಂತೋಷಪಟ್ಟರು. ಸಂಸ್ಥೆಯ ಪುರೋಭಿವೃದ್ಧಿಗೆ ಅಗತ್ಯವಾದ ಏರ್ಪಾಡುಗಳಿಗೆ ಸೂಕ್ತ ಸಲಹೆಗಳನ್ನೂ ಸಹಕಾರಮನೋಭಾವವನ್ನೂ ಪ್ರಕಟಿಸಿದರು. ಶ್ರೀಯುತರು ಗುರುದೇವತಾಪ್ರಸಾದಗಳನು ಸ್ವೀಕರಿಸಿ ಹಿಂದಿರುಗಿದರು. ಇವರೊಡನೆ ಪೂಜ್ಯ ಶ್ರೀ ನೂಲೇನೂರು ಶ್ರೀನಿವಾಸಮೂರ್ತಿಗಳವರೂ ದಯಮಾಡಿಸಿದ್ದರು.

**ಪುನರ್ಮುದ್ರಣ ಯೋಜನೆ :** ಪೂಜ್ಯ ಶ್ರೀಶ್ರೀಗಳವರ ಅನೇಕ ಕೃತಿಗಳ ಪುನರ್ಮುದ್ರಣದ ವಿಷಯಕ್ಕೆ ಮಹಾಜನರಿಂದ ಸಲಹೆಗಳೂ ಒತ್ತಾಯವೂ ಬರುತ್ತಲೇ ಇವೆ. ಕಾರ್ಯಾಲಯದವರಿಗೂ ಸ್ಟಾಕು ಮುಗಿದಿರುವ ಗ್ರಂಥಗಳ ಹೊಸ ಹೊಸ ಸಂಸ್ಕರಣಗಳನ್ನು ತರುವ ಆಸೆಯಿದೆ. ಆದರೆ ಯಾವದೇ ಗ್ರಂಥವನ್ನು ಒಂದುಸಾವಿರ ಪ್ರತಿಗಳನ್ನು ಮುದ್ರಿಸಿದಾಗ ಪ್ರಾರಂಭದಲ್ಲಿ ಎರಡುನೂರು ಪ್ರತಿಗಳವರೆಗೆ ತ್ವರಿತವಾಗಿ ಮಾರಾಟವಾಗಿಬಿಡುತ್ತದೆ. ಅನಂತರ ಉಳಿಯುವ ಪ್ರತಿಗಳಿಗೆ ವರ್ಷಗಟ್ಟಲೆ ಬೇಡಿಕೆಯೇ ಇರುವದಿಲ್ಲ. ಹೀಗಾಗಿ ಬಹಳ ಗ್ರಂಥಗಳು ಮಾರಾಟವಾಗದೆ ಸ್ಟಾಕು ಉಳಿದಿವೆ. ಆದ್ದರಿಂದ ಮಹಾಜನರು ಪುನರ್ಮುದ್ರಣಕ್ಕೆ ಬೇಡಿಕೆಯನ್ನು ಸಲ್ಲಿಸುವಾಗ ಕನಿಷ್ಠವಾಗಿ ಆಯಾ ಗ್ರಂಥದ ಒಂದುಸಾವಿರ ಪ್ರತಿಗಳ ಮುದ್ರಣಕ್ಕೆ ಅಗತ್ಯವಾದಷ್ಟು ಕಾಗದವನ್ನಾಗಲಿ-ಹಣವನ್ನಾಗಲೀ ವೈಯಕ್ತಿಕವಾಗಿ ಅಥವಾ ಸಾಮೂಹಿಕವಾಗಿ ಚಂದಾರೂಪದಲ್ಲಿಯಾಗಲೀ ಕೊಡಿಸಿಕೊಟ್ಟರೆ ಪುನರ್ಮುದ್ರಣಯೋಜನೆಯನ್ನು ಕಾರ್ಯಗತ ಮಾಡಬಹುದಾಗಿದೆ. ಸದ್ಯಕ್ಕೆ **"ಭಗವದ್ಗೀತೆಯ ಉಪನ್ಯಾಸಗಳು"** ಎಂಬ ಗ್ರಂಥದ ಪುನರ್ಮುದ್ರಣದ ಸಲಹೆ ಬಂದಿದೆ. ಇದಕ್ಕೆ ಅಗತ್ಯವಾಗಿರುವ ಕಾಗದ ಸುಮಾರು ೮೦ ರೀಮುಗಳು. (ಹಣವು ಈಗಿನ ಬೆಲೆಯಂತೆ ರೂ. ೧೬,೦೦೦ ಆಗಲಿದೆ). ಉದಾರಾಶಯರು ಈ ಜವಾಬ್ದಾರಿಯನ್ನು ವಹಿಸಿದಲ್ಲಿ ಪುನರ್ಮುದ್ರಣವನ್ನು ಕೈಗೊಳ್ಳಲಾಗುವದು.

---

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು:** ಶ್ರೀಯುತರುಗಳಾದ: MPN- 827 ಅಮರಾವತಿ ಗೋವಿಂದಶೆಟ್ಟರು, ದಾವಣಗೆರೆ; 828 ಎಂ.ಎಸ್. ಎಲ್. ನರಸಿಂಹಯ್ಯನವರು, ಬೆಂಗಳೂರು, 829 ಶ್ರೀಮತಿ ಕೆ. ಎಸ್. ಶಾಂತಾ ದೇವಿಯವರು, ಬೆಂಗಳೂರು- ಇವರುಗಳು ರೂ. ೧೫೧ ರಂತೆ ಮಹಾಪೋಷಣದ್ರವ್ಯ ವನ್ನು ಕೊಟ್ಟಿರುತ್ತಾರೆ. MPO- 584 ಶ್ರೀ ಹೆಚ್. ಎಸ್. ಚಂದ್ರಶೇಖರ ಶಾಸ್ತ್ರಿಗಳು, ಬೆಂಗಳೂರು--ರೂ. ೫೦ ನ್ನು ಹೆಚ್ಚಿನ ಮಹಾಪೋಷಣದ್ರವ್ಯವನ್ನಾಗಿ ನೀಡಿ ಸಹಕರಿಸಿದ್ದಾರೆ.

**೫೪ ನೆಯ ಸಂಪುಟಕ್ಕೆ ಪೋಷಕರುಗಳು:** ಶ್ರೀಗಳಾದ: ಚಂದ ನಂ. 508 ಎಸ್. ರಾಜಯ್ಯಂಗಾರ್ಯರು, ಹೊಳೆನರಸೀಪುರ; 511 ಎಚ್. ಎಸ್. ಸತ್ಯನಾರಾಯಣರಾವ್‌ರವರು, ಹಾಸನ; 520 ಎಂ. ಪಿ. ಲಕ್ಷ್ಮೀಪತಿಭಟ್ಟರು, ಹರಿಹರ; 528 ಎಂ.ಎಸ್. ಹಿರಿಯಣ್ಣನವರು, ಹೊಸದುರ್ಗ; 536 ವೆಂಕಟೇಶ ರಾಯರು, ಬೆಂಗಳೂರು-- ಈ ಮಹಾಶಯರುಗಳು ರೂ. ೨೦ ರಂತೆ ಪೋಷಣದ್ರವ್ಯ ವನ್ನು ನೀಡಿರುತ್ತಾರೆ.

1985 ನೆಯ ಫೆಬ್ರವರಿ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯ ವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ:-

**ಗ್ರಂಥಪ್ರಕಟನ ನಿಧಿಗೆ:** ಶ್ರೀಯುತ ಎನ್. ವಿ. ಕೃಷ್ಣಪ್ಪನವರು, ಬೆಂಗಳೂರು (ಇವರು ದಿವಂಗತರಾದ ತಮ್ಮ ಪೂಜ್ಯ ಮಾತೃಶ್ರೀ ನಂಜಮ್ಮನವರು ಹಾಗೂ ತೀರ್ಥರೂಪು ಎನ್. ಕೆ. ವೆಂಕಟರಾಮಯ್ಯನವರ ನೆನಪಾಗಿ) ರೂ. ೧,೦೦೦; (ಈ ಮೊಬಲಗನ್ನು "ಶಿವಕವಚ" ಗ್ರಂಥಪ್ರಕಟನೆಗೆ ವಿನಿಯೋಗಿಸಲಾಗಿದೆ). ಶ್ರೀಮತಿ ಅರಕಲಗೂಡು ಭಾಗೀರಥಮ್ಮನವರು, ಹೊಳೆನರಸೀಪುರ ರೂ. ೧೦೦೦; (ಈ ಮೊಬಲಗನ್ನು "ಸರಸ್ವತೀರಹಸ್ಯೋಪನಿಷಚ್ಚಂದ್ರಿಕೆ" ಎಂಬ ಗ್ರಂಥ ಪ್ರಕಟನೆಗೆ ವಿನಿಯೋಗಿಸಲಾಗುವದು.) ವೇ|| ಹೆಚ್. ರಾಮಚಂದ್ರಶಾಸ್ತ್ರಿಗಳು, ಬೆಂಗಳೂರು ರೂ. ೧೦೦; ಒಟ್ಟು ರೂ. ೨೧೦೦;

**ಗುರುಮಂದಿರನಿಧಿಗೆ:** ಯಾದಾಳಂ ವಂಶೀಕರಿಂದ ರೂ. ೧೦;

**ಪೂಜಾಮಂದಿರನಿಧಿಗೆ:** ಯಾದಾಳಂ ವಂಶೀಕರಿಂದ ರೂ. ೧೫;

**ವಿದ್ಯಾರ್ಥಿಖಾತೆಗೆ:** ಶ್ರೀ ಕೆ. ನಂಜಪ್ಪನವರು, ಕೆಂಬಾಳು ರೂ. ೧೦;

**ಸಂನ್ಯಾಸಿಗಳ ಸತ್ಕಾರಖಾತೆಗೆ:** ಶ್ರೀಮತಿ ಕೆ. ವಿ. ಲಲಿತಾಂಬರವರು, ಹೊಳಲ್ಕೆರೆ ಇವರಿಂದ ರೂ. ೨೦;

ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಈ ಮೂಲಕ ಸಮರ್ಪಿಸುತ್ತೇವೆ.

---

easy even for pundits or scholars. It is very essential to know this. Hence listen, I will tell you the essence of it. People have known that – 'we are the performers of Karma; is it not ? In truth, there is no Kartruthwa (sense of agentship of action) at all in their true essence of Being; knowing that we are performing Karma (action) is erroneous. Similarly, it is also erroneous to think that to sit quiet without doing anything – that alone is Akarma (non-action). Because, in the thought–' I am sitting quiet,' there being the relationship of the ego, even this sitting quiet also is a kind of Karma alone. Thus as people have understood Karma as Akarma and Akarma as Karma, one who is wise should properly change this (misconception) and understand (properly). Such a man will have achieved what is to be achieved (He attains the goal of Life). Such a person's Karmas do not have at their root any desire or any motive or intention. As his Karmas have been burnt away by the fire called Jnaana (Self-Knowledge), those Karmas cannot yield their respective fruits.

VERSES : 20 – 24

" One who, while performing Karma, acquires this wisdom - he may continue to perform that Karma as before for the welfare of the society. In this context or event he does not truly become a performer of Karma. Because, from the standpoint of Jnaana (Self-Knowledge) his Karma or action is Akarma or non-action alone. One who acquires

this Jnaana (Self-Knowledge), even before he undertakes an action (even before entering the stage of householdership or bachelorship) that person especially will not desire to perform any Karma at all. Having abandoned or renounced all Karmas, he will be doing only so much Karma as is needed for the upkeep or maintenance of his body or physique. To him there is no taint from the action he performs. From the standpoint of the Jnaani there is no Karma at all in him; even if he seems to be doing Karma from the standpoint of others, there is no possibility of any fruit accruing to him from it. Because, in truth, Karma has become Brahman. This alone is the vision or outlook of a Jnaani (because all duality is falsified by the Self-Knowledge).

VERSES : 25 - 33

" In this world there are some who perform Yagna (sacrifice) invoking deities, some who perform Yagnas which is Jnaana (Knowledge) about Brahman. Except Jnaana Yagna the remaining Yagnas (sacrifices) are of various kinds. To explain, some control or suppress the senses; this is Samyama Yagna (sense control). Some will enjoy only righteous things through senses; this is Indriya Yagna (control of enjoyment). Some after having controlled the mind keep a check on sensual Karmas as well as Praana Karmas (control of organs of action); this is Aatma Samyama Yagna (mind control). Some perform Krichra

(taking meals on alternate days and in between observing fast) and Chaandraayana (fasting on Amaavaasya or no moon day; thereafter he increases his food by one morsel a day and on the full moon day 15 morsels he takes and again decreases the quantum till no moon day) etc. ; this is Tapo Yagna (sacrifice of austerity). some study the Vedas methodically; this is Swaadh-yaaya Yagna ( sacrifice of chanting Vedas ). Some control the breath and perform Rechaka (exhalation), Pooraka (inhalation) and Kumbhaka (retention); this is Praanaayaama Yagna (sacrifice of the vital force). Whatever Yagna be performed, there will be redemption from sin by Yagna. The food that is eaten by these performers of Yagna will be called Amrit or ambrosia. One who is a human being will have to be doing some kind of a Yagna, otherwise he will not beget the happiness of this world. But all these Yagnas are imbued with Karma; Jnaana Yagna alone has transcended Karma One who knows this gets emancipated. As in the bliss of Mukti or Liberation all kinds of happiness have merged ; in the fruit of Jnaana Yagna the fruits of all Karmas are hidden. Hance Jnaana Yagna alone is better than materialistic Yagna.

VERSES : 34 - 39

"The path for obtaining this (Jnaana) Yagna is to approach a Sadguru or preceptor who has known the essential nature of Being or the Ultimate Truth

and who is established in It, to prostrate before him, to keep on serving him and to ask questions pertaining to the Ultimate Truth and to obtain proper answer from him. Mere prostrations which are outward disciplines are not enough; in the main, he should have Shraddha (one-pointed dedication), all-consuming interest in Jnaana only and control over the senses. All the delusion of one who has all these qualifications will be eradicated by the Jnaana obtained from the teaching of the Guru or preceptor. The Truth clearly enunciated in the Upanishads that "Parameshwara alone who is the Self of all creatures is my Self" will be embedded in the mind and all Dharmas and Adharmas would be burnt to ashes by this Jnaana. There will also be Libeıation from all kinds of bondages of Samsaara.

VERSES : 40 - 42

" One who without knowing the Ultimate Truth and not having faith in the statement of the Guru as well as in the Shaastra (scriptures) keeps on doubting whether or not there will be liberation from Jnaana will be ruined. To one who has doubts even the happiness which is the fruit of the dealings in this world will not accrue; then how can the happiness of the other worlds be obtained? But Karmas can never bother one who has got rid of all doubts by means of Jnaana; one who has transcended all Karmas by the Yoga of Paramaartha Darshana (Intuitive Vision of the Self, the Ultimate Reality) and has remained awake without falling into the

## ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,

**ನಂ. 68, ೩ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028**

( ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು )

**1985ನೆಯ ಏಪ್ರಿಲ್ ಮಾಹೆಯಲ್ಲಿ ನಡೆಯುವ**

**ವಿಶೇಷ ಉಪನ್ಯಾಸಗಳು ; ಸಂಜೆ 5 ರಿಂದ 6 ರ ವರೆಗೆ**

1. 6-4-85ನೆಯ ಶನಿವಾರ

ಪ್ರೊ. ಸಿ. ರಾಮನಾಥನ್, M.A., (ಆಚಾರ್ಯಪಾಠಶಾಲಾ) ಇವರಿಂದ
**"ರಘುವಂಶದಲ್ಲಿ ವೇದಾಂತತತ್ತ್ವಗಳು"**

2. 7-4-85ನೆಯ ಭಾನುವಾರ

ವಿದ್ವಾನ್ ಎಸ್. ರಂಗನಾಥಶರ್ಮಾ, M A., ಇವರಿಂದ
**"ವೇದಾಂತದ ಮೂಲಪ್ರಕ್ರಿಯೆಗಳು"**

3. 13-4-85ನೆಯ ಶನಿವಾರ

ಡಾ॥ ಎಂ. ಕೆ. ಭಾರತೀರಮಣಾಚಾರ್ಯರು, M.A.,Ph.D., ಇವರಿಂದ
**"ಶ್ರೀಕೃಷ್ಣ"**

4. 14-4-85ನೆಯ ಭಾನುವಾರ

ಶ್ರೀಮತಿ ಸಿ. ಎನ್. ಮಂಗಳಾ ( N.M.K.R.V. ) ಇವರಿಂದ
**"ಸ್ವಾಮಿ ವಿವೇಕಾನಂದರ ವೇದಾಂತಸಾರ"**

5. 20-4-85ನೆಯ ಶನಿವಾರ

ಶ್ರೀ ದತ್ತಾತ್ರೇಯ ಡಿ. ಕುಲಕರಣಿ, M.Sc., ಇವರಿಂದ
**"ಮನುಷ್ಯನೂ ಇತರ ಪ್ರಾಣಿಗಳೂ"**

6. 21-4-85ನೆಯ ಭಾನುವಾರ

ಅಧ್ಯಾತ್ಮವಿದ್ಯಾಪ್ರವೀಣ ಕೆ. ಜಿ. ಸುಬ್ರಾಯಶರ್ಮರವರಿಂದ
**"ನೈಷ್ಕರ್ಮ್ಯಸಿದ್ಧಿ"**

7. 27-4-85ನೆಯ ಶನಿವಾರ

ಡಾ॥ ಕೆ. ಎಸ್. ನಾಗರಾಜನ್, B Sc., Ph.D., ಇವರಿಂದ
**"ಭಗವತ್ಪಾದರ ಸ್ತೋತ್ರಗಳು"**

8. 28-4-85ನೆಯ ಭಾನುವಾರ

ವಿದ್ವಾನ್ ಎನ್. ರಂಗನಾಥಶರ್ಮಾಜಿ ಇವರಿಂದ **"ಪ್ರತಿಬೋಧವಿದಿತಂ"**

**ವಿಶೇಷ ಸೂಚನೆ:** ದಿನಾಂಕ 25-4-85 ರಿಂದ 1-5-85 ರ ವರೆಗೆ **ಶ್ರೀಶಂಕರಸಪ್ತಾಹಮಹೋತ್ಸವವು** ಪ್ರತಿವರ್ಷದಂತೆಯೇ ನಡೆಯುತ್ತದೆ.

**ತಮಗೆಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028
ತಾ॥ 1-4-1985.

**ಕೆ. ಜಿ. ಸುಬ್ರಾಯಶರ್ಮ,**
ಕಾರ್ಯದರ್ಶಿ.

Regd. No.
KRNI-8

# ADHYATMA Prakasha

Registered with the Registrar of News-papers for India under No. R. N. 13244/57


## ಕೇಳಿರಿ

ಜೀವನಿಗೆ ಜನನಮರಣಗಳುಂಟೆಂದು ಅಜ್ಞರ ಅಭಿಪ್ರಾಯ. ಆದರೆ ಜೀವನು ವ್ಯವಹಾರಕಾಲಕ್ಕೆ ತಾನೆಂದುಕೊಂಡಿದ್ದ ದೇಹಾದಿಗಳನ್ನು ಬಿಡುವದು, ಸ್ವೀಕರಿಸುವದು-ಇವುಗಳನ್ನು ಕರ್ಮವಶದಿಂದ ಹೊಂದಿದ್ದಾನೆ. ಸ್ವರೂಪದಿಂದ ಅವನು ಚೇತನನೂ ನಿತ್ಯನೂ ಶಾಶ್ವತನೂ ಜನ್ಮಾದಿರಹಿತನೂ ಆಗಿದ್ದಾನೆ. ಅಷ್ಟೇ ಅಲ್ಲ. ಅವನೇ ಬ್ರಹ್ಮವಾಗಿದ್ದಾನೆ. ಚೇತನದ್ವಯಗಳಿರುವದು ಅಸಂಭವವಾದ್ದರಿಂದ ಜೀವನಾಗಿ ತೋರಿಕೊಂಡ ಆತ್ಮನು ಪರಬ್ರಹ್ಮವೇ- ಎಂದು ಉಪನಿಷತ್ತು ತಿಳಿಸುತ್ತಿದೆ.

To.

Sri

M 414 Sri J. Sreenivasa
Murthy, No. 18, II Cross
Kodanda Rampuram
P.O. BANGALORE-3





Edited Printed & Published by H. S. Lakshminarasimha Murthy
as Secretary for The Adhyatma Prakasha Karyalaya,
At The Adhyatma Prakasha Press, Holenarsipur - 573211
6—4—1985